ಕನ್ನಡ ಪ್ರಪಂಚ ಸಾಹಿತ್ಯಮಾಲೆ—೩.

# ಅವಳ ಹುಚ್ಚು

(ಕಥಾಸಂಕಲನ)

ದಿ। ಕಾರ್ಯಹಳ್ಳ ರಾಮಕೃಷ್ಣ ಶೆಟ್ಟಿ

ಸಮಾಜ-ಪುಸ್ತಕಾಲಯ,
ಧಾರವಾಡ.
1950

ಕ್ರಯ: ರೂ. 0-14-0.

ಕನ್ನಡ ಪ್ರಪಂಚ ಪ್ರಕಾಶನ,
ಗಣಪತಿ ಹೈಸ್ಕೂಲು ರಸ್ತೆ,
ಮಂಗಳೂರು.

ಸಂಪಾದಕರು:

ಬಿ. ಶಂಕರ ಭಟ್ಟ,

ಕೆ. ಎಮ್. ಆರ್. ಶೆಟ್ಟಿ.

: ಮುಂದಿನ ಪುಸ್ತಕ :

ಭಾರತೀಸುತರ

# ತಲೆತಿರುಕ ಯೋಧ

ಓದುಗರನ್ನು ನಗೆಯ ಕಡಲಲ್ಲಿ ಮುಳುಗಿಸುವ

ಉತ್ತಮ ಕಾದಂಬರಿ!

## ಪರಿವಿಡಿ:

# ಅವಳ ಹುಚ್ಚು

ಅವಳಿಗೆ ಹುಚ್ಚು ಎಂದು ಅವರಿವರು ಹೇಳುವುದನ್ನು ನಾನೂ ಕೇಳಿದ್ದೇನೆ. ನಾನು ಅವಳನ್ನು ಆಗಾಗ ನೋಡುತ್ತಿರುವವನು. ನಮ್ಮ ಕಚೇರಿಯು ದಾರಿಯಾಗಿ ಅವಳು ದಿನವೂ ಚಾಕರಿ ಮಾಡುವುದಕ್ಕೆ ಹೋಗುವಳು. ಆದರೆ ನನ್ನ ಕಣ್ಣಿಗೆ ಅವಳು ಹುಚ್ಚಿ ಇದ್ದಂತೆ ಎಂದೂ ತೋರಿ ಬಂದುದಿಲ್ಲ.

ಅವಳು ತನ್ನ ಪಕ್ಕದಲ್ಲಿ ಸೇರಿಸಿಕೊಂಡು ಹೋಗುವ ಆ ಕೂಸನ್ನು, ಇನ್ನೂ ನಾಲ್ಕು ತಿಂಗಳ ಕೂಸಿರುವಾಗ, ನಾನು ಎಲ್ಲೋ ನೋಡಿದ ನೆನಪು. ಹೊನ್ನಿನಂತೆ ಥಳಥಳಿಸುತ್ತಿತ್ತು; ಬೊಂಬೆಯಂತೆ ತುಂಬಿಕೊಂಡಿತ್ತು. ಈಗ ಅದಕ್ಕೆ ವಯಸ್ಸು ಎರಡು–ಮೂರು ದಾಟಿರಬಹುದು. ಅದು ಏಳೆಂಟು ತಿಂಗಳು ಜಾಡು ಹಿಡಿದ ಗೂರಲು ಕೂಸಾಗಿದೆ. ನೋಡಿದರೆ, ಅಯ್ಯೋ ಎನಿಸುತ್ತದೆ.

ಅವಳಾದರೂ ಇದೇ ರೀತಿಯಾಗಿ ಬಾಡಿ ಹೋದದ್ದು ತೋರುವುದಿಲ್ಲ. ನಾಲ್ಕು ವರುಷಗಳಿಗೆ ಹಿಂದೆ ಅವಳನ್ನೊಮ್ಮೆ ರೈಲ್ವೇ ನಿಲ್ದಾಣದಲ್ಲಿ ಕಂಡ ನೆನಪು ಇನ್ನೂ ಮಾಸಿಲ್ಲ. ತುಂಬು ಜವ್ವನೆ; ಅಂದು ಹೇಗಿದ್ದಳೋ, ಇಂದೂ ಹಾಗೇ ಮಾಟವಾಗಿದ್ದಾಳೆ.

ಅವಳು ಹುಚ್ಚಿ ಎನ್ನುವವರು ಹೇಳುವ ದಾಕಲೆಗಳು ಬಹಳ ಮೋಜಿನವಿವೆ. ನಮ್ಮ ಕಚೇರಿಗೆ ಹತ್ತಿರದ ಒಂದು ಮನೆಯಲ್ಲಿ ಅವಳು ಚಾಕರಿ ಮಾಡುತ್ತಿದ್ದಳು. ನೆರೆಕರೆಯ ಹೆಂಗಸರು ಕೆಲವೊಮ್ಮೆ ಸಂಜೆಯ ಹೊತ್ತಿನಲ್ಲಿ ಈಕೆ ಹೊರಟುಹೋದ ಮೇಲೆ, ಅಲ್ಲಿ ಕೂಡುವುದುಂಟು. ಇವರ ಮಾತುಕತೆಗಳನ್ನು ಕೇಳಿದರೆ, ಈ ಹೆಂಗಸರು ಸಂಜೆಯ ಹೊತ್ತು ಇಲ್ಲಿ ಕೂಡಿಕೊಂಡು, ಯಾರ ಬಾಳನ್ನು ಪಿತೂರಿ ನಡೆಸಿ ಹಾಳುಗೆಡಹುವರೋ ಎಂದು ನನಗೆ ಒಂದೊಮ್ಮೆಗೆ ಸಂದೆಯ ಹುಟ್ಟದೆ ಇಲ್ಲ.

ಈ ಹೆಂಗಸರು ಅಲ್ಲಿ ಕೂಡುವ ಹೊತ್ತಿಗೆ ನಮ್ಮ ಕಚೇರಿಯ ಕೆಲಸ ಮುಗಿದಿರುತ್ತದೆ. ನಾನು ಸಂಜೆಯ ಪೇಪರನ್ನು ಕಚೇರಿಯಲ್ಲೇ ಓದಿಕೊಂಡು ಮನೆಗೆ ಹೋಗುತ್ತಿದ್ದೆ. ಒಂದು ದಿನ ನಾನು ಒಂದು ಕಿಟಿಕಿಯ ಬಳಿಯಲ್ಲಿ ಪೇಪರು ಓದುತ್ತಾ ಕುಳಿತಿದ್ದಾಗ, ಆಚೆಯ ಕಡೆಯಿಂದ ಕೆಲವು ಹೆಂಗಸರು ಮಾತನಾಡುವುದು ಕೇಳಿಸಿತು.

ಒಬ್ಬಳು ತುಸು ತೋರ ದನಿಯಲ್ಲಿ ಅಂದಳು.

'ಅಲ್ಲವೇ ಅಕ್ಕಾ, ನಿಮ್ಮ ಚಿನ್ನಕ್ಕ ಈಗ ಕೆಲವು ದಿನಗಳಿಂದ ಪೂರಾ ಬಾಡಿ ಹೋಗಿದ್ದಾಳೆ . . . . ."

ಇನ್ನೊಬ್ಬಾಕೆ, ವಯ್ಯಾರದ ಕೊಂಕುನುಡಿಯಲ್ಲಿ ಆಡುತ್ತಿರುವ ಒಂದು ಎಳೆದನಿಯಲ್ಲಿ ಹೇಳಿದಳು: 'ನಾನೂ ಕೇಳಿದೆ ಅವಳಿಗೆ ಹುಚ್ಚು ತಾಗಿದೇಂತ.'

ಮೂರನೆಯವಳು, ಎಲ್ಲರೂ ಮಾತನಾಡುವ ಸುಮಾರಿನ ದನಿಯಲ್ಲೇ ಮಾತನಾಡಿದಳು: 'ಹುಚ್ಚು ಗಿಚ್ಚು ಏನಿಲ್ಲ. ಅವಳಿಗೂ ಅವಳ ತಾಯಿಗೂ ಇರುಳು ಹಗಲು ಜಗಳಾಗುತ್ತದೆ. ಅವಳ ಬಾಳ್ವೆ ಈಚೆಗೆ ಸರಿಹೋಗಿಲ್ಲ . . . '

ಆಗ, ಎರಡನೆಯವಳ ದನಿಯಂತೆ ಮುಂದಿನ ಮಾತು ನಡುವೆ ಕೇಳಿಸಿತು: 'ಹುಚ್ಚಲ್ಲದೆ ಮತ್ತೇನು? ಕೂಸಿಗೆ ಸರಿಯಾಗಿ ಹಾಲು ಕೊಡುವುದಿಲ್ಲ. ಈ ಮನೆಯಲ್ಲದೆ ಬೇರೆ ಕೆಲವು ಮನೆಗಳಲ್ಲಿ ಚಾಕರಿ ಮಾಡುತ್ತಾಳೆ. ಯಾವುದೋ ಒಂದು ಮನೆಯಲ್ಲಿ ಟೇಬಲ್ ಲ್ಯಾಂಪ್, ಪಿಂಗಾಣಿಯ ಕೆಲವು ಪಾತ್ರೆಗಳು ಮತ್ತು ಒಂದು ಕುರ್ಚಿಯನ್ನು ಕೂಡ ಮುರಿದು ಹಾಕಿದ್ದಾಳಂತೆ. ಅವಳ ತಲೆ ಕೆಟ್ಟು ಹೋಗಿದೆ, ಎನ್ನುವುದಕ್ಕೆ ನನಗ್ಯಾವ ಅನುಮಾನವೂ ತೋರುವುದಿಲ್ಲ...........'

'ಆ ಕತೆ ನಾನೂ ಕೇಳಿದೇನೆ; ಅದು ಹೌದಂತೆ. ಇನ್ನೊಂದು ಕಡೆಯಲ್ಲಿ ಮಕ್ಕಳಾಡುವ ಗಾಜಿನ ಬೊಂಬೆಗಳನ್ನು ಅವಳೇನೋ ಆಟವಾಡಿ ಒಡೆದಳಂತೆ. ಅದೇ ಮನೆಯವರ ಬಚ್ಚಲು ಮನೆಯಲ್ಲಿ ಹೆಂಗಸರು ಮಡ ಚಿಟ್ಟ ಒಂದೆರಡು ಸೀರೆಗಳನ್ನು ಬೆಂಕಿ ಹತ್ತಿಸಿ ಸುಟ್ಟಳಂತೆ. ಏನೋ ಪುಣ್ಯಕ್ಕೆ ಅಲ್ಲಿ ಗಂಡಸರು ಇದ್ದರು. ಅವರು ಬೆಂಕಿಯನ್ನು ಹೊತ್ತಿಗೆ ಬಂದು ಆರಿಸದೆ ಇರುತ್ತಿದ್ದರೆ, ಏನಾಗುತ್ತಿತ್ತೋ...........' ಈ ಮಾತುಗಳನ್ನು ಆಡಿದ ದನಿ- ಅದನ್ನು ಹೇಗೆ ಬಣ್ಣಿಸುವುದೆಂದು ತಿಳಿಯುವುದಿಲ್ಲ. ಕೋಗಿಲೆಯ ದನಿ ಅಂತೂ ಅಲ್ಲ. ಕಪ್ಪೆಯ ಕೊರಳನ್ನು ಕದ್ದುಕೊಂಡಂತೆ ಕೇಳಿಸಿತು.

ಇದಕ್ಕೆ ಸರಿದೂಗುವ ಇನ್ನೊಂದು ದನಿ ಕೇಳಿಸಿತು: "ಅವಳು ಚಾಕರಿ ಮಾಡಲು ಹೋದಲ್ಲಿ, ಅಲ್ಲಿಯಿಲ್ಲಿ ನಿಂತುಕೊಂಡು, ಯಾಕೋ ಅಳುತ್ತಿರುತ್ತಾಳೆ. ಮನೆಯವರು ಕಂಡರೆ, ಸುಮ್ಮನೆ 'ಏನಿಲ್ಲ' ಎನ್ನುವಳು; ನಗುವಳು. ಇದನ್ನು ಅವಳ ಮನೆಯ ಹತ್ತಿರ ಇದ್ದವಳೊಬ್ಬಳು ಹೇಳಿದಳು—"

'ಅದೇನು ಹುಚ್ಚು ಹೌದೋ, ಅಲ್ಲೋ?'

ಇದು ಎರಡನೆಯುವಳ ಮಾತಿರಬೇಕು. ಮುಂದೆ ಅವರಿವರು ಮಾತನಾಡಿಕೊಂಡರು. ಆದರೆ ನನಗೆ ಏಕೋ ಹೆಚ್ಚಿಗೆ ಕೇಳುವ ಇಚ್ಛೆಯಾಗಲಿಲ್ಲ. ನಾನು ಮನೆಯು ಕಡೆ ಹೊರಟೆ.

ಆ ದಿನವೂ ದಾರಿಯಲ್ಲಿ, ಅದೇ ಆ ಹೆಣ್ಣುಮಗಳು, ಚಿನ್ನಕ್ಕ, ಹೋಗುವುದನ್ನು ಕಂಡೆ. ಏನೋ ಮನಸಿಗೆ ಬೇಸರ, ಮೈಗೆ ದುಡಿದ ದಣುವು ತಾಗಿ ತುಸು ಬಾಡಿಸಿದ್ದಂತೆ ತೋರಿತು.

ಚಿನ್ನಕ್ಕ ಬಡವೆ. ಹೊಟ್ಟೆಯು ಪಾಡಿಗಾಗಿ ನಾಲ್ಕು ಮನೆಗಳ ಬಾಗಿಲಲ್ಲಿ ಹಗಲೆಲ್ಲ ಮೈ ಮುರಿದು ದುಡಿಯುತ್ತಾಳೆ. ಆಕೆಯು ಮನಸಿಗೆ ಅಂಟಿದ ಬೇನೆ ಬೇಸರವೇನಿರಬಹುದೋ! ಆದರೆ ಎನಿತು ದುಡಿದರೂ ಈ ಚಾಕರಿಯ ಜನಕ್ಕೆ ಹೊಟ್ಟೆ ತುಂಬ ಹಿಟ್ಟು ಇಲ್ಲ; ಉಡಲು ಸಾಕನಿತು ಬಟ್ಟೆಬರೆಗಳೂ ಒದಗುವುದಿಲ್ಲ! ಏಕೆಂದರೆ ಇವರು ಚಾಕರಿ ಮಾಡುವುದಾದರೂ ದರಿದ್ರರ ಮನೆಯಲ್ಲಿಯೇ. ತಮ್ಮ ಮನೆಯು ಕೆಲಸದ ಹೆಣ್ಣು ಎಂದು ಹೊಟ್ಟೆ ತುಂಬ ಹಾಕುವ ದೊಡ್ಡ ಮನಸಿನ ದೊಡ್ಡವರು ಯಾರೂ ಇಲ್ಲ. ಚಿನ್ನಕ್ಕ ಅಂತೂ ಹಗಲೆಲ್ಲ ದುಡಿದು, ಇರುಳು ಹಸಿದು ಬೀಳುವಳೇನೋ; ಹಸಿವಿಂದಲೇ ಅವರು ಸಂಕಟ ಪಡುತ್ತಿರಬೇಕು. ಹಸಿದಾಗ ಯಾರ ತಲೆಯೂ ತಿರುಗುತ್ತದೆ. ಹೊರತು ಚಿನ್ನಕ್ಕನ ಬಾಳಿನಲ್ಲಿ ಇನ್ನೇನು ಹೇಳಲಾರದ ಬೇನೆಬೇಗುದಿಗಳಿವೆಯೆಂದು ಯಾರು ಬಲ್ಲರು?

ಮನಸಿಗೆ ನೆಮ್ಮದಿ ಇಲ್ಲದೆ, ಯಾರು ಏನು ಮಾಡಿದರೂ ಅದು ಚೆನ್ನಾಗುವುದಿಲ್ಲ; ಎಂತಹ ಹಿರೇ ಕೆಲಸವಾದರೂ ಅದು ಅರೆಗೆಲಸದಲ್ಲಿ ಮುಗಿತಾಯವಾಗುವುದು. ಚಿನ್ನಕ್ಕನ ಮನಸಿಗೆ ನೆಮ್ಮದಿ ಇಲ್ಲ ಎಂಬುದೇನೋ ನಿಜವೇ; ಏನೋ ಎಚ್ಚರವಿಲ್ಲದೆ ಕೈ ತಪ್ಪು ಮಾಡಿದಳು. ತಿಳಿದು ಯಾರಾದರೂ, ಬೇಕೆಂತಲೇ ಲ್ಯಾಂಪನ್ನು ಒಡೆದು ಹಾಕುವರೆ? ಪಿಂಗಾಣಿಯ ತಟ್ಟೆಗಳನ್ನು ಚೂರು ಮಾಡುವರೆ? ಕುರ್ಚಿಯನ್ನು ಮುರಿದು ಚೆಲ್ಲುವರೆ? ಇಂತಹ ಕೈ ತಪ್ಪುಗಳು ಮನೆಯ ಹೆಂಗಸರಿಂದ ಆಗಾಗ ಆಗುತ್ತಲೇ ಇರುತ್ತವೆ. ಚಾಕರಿಯುವರ ಕೈಯಿಂದ ಆದರೆ ಊರೆಲ್ಲ ಅದನ್ನು ಕೊಂಡಾಡಲೇನುಂಟು?

ಮಕ್ಕಳಾಡುವ ಬೊಂಬೆಯನ್ನು ಒಡೆದು ಹಾಕಿದ ಚಿನ್ನಕ್ಕ ಹುಚ್ಚಿಯಾದರೆ, ಅವಳನ್ನು ಮಕ್ಕಳೊಡನೆ ಆಡಲು ಬಿಟ್ಟುದು ತಪ್ಪು ಅಲ್ಲವೆ? ಆಕೆಯು ಕೈಯಿಂದ ಒಡೆಯಿತೆನ್ನುವ ಅಂತಹ ಬೊಂಬೆಗಳನ್ನು ಮಕ್ಕಳು ಎಳೆದಾಡಿದರೆ ಏನಾಗುವುವೋ!

ಬಡವೆ ಚಿನ್ನಕ್ಕನ ಕೈಯಿಂದ ಇಂತಹ ಸಣ್ಣ ಪುಟ್ಟ ಕೈ ತಪ್ಪುಗಳು ಉಂಟಾದರೆ ಅದು ಹುಚ್ಚು. ಆಳು ಮಾಡಿದರೆ ಹಾಳು ಎಂದು ನಮ್ಮ ನಾಡಿನ ಗಾದೆಯ ಮಾತೂ ಇದೇ ಕುರುಹನ್ನು ಹೇಳುತ್ತದೆ. ಮನೆ ಮಂದಿ ಕಳೆದದ್ದೆಲ್ಲ ಬಂತು; ಆಳು ಮಕ್ಕಳು ಉಳಿಸಿದರೂ ಹೋಯ್ತು!

ಚಿನ್ನಕ್ಕ ಸುಮ್ಮನೆ ನಿಂತು ಅತ್ತಳು. ಯಾರಾವರೂ ತನ್ನನ್ನು ಕಂಡಾಗ ನಕ್ಕಳು. ಇದಕ್ಕಾಗಿ ಅವಳನ್ನು ಹುಚ್ಚಿ ಎಂದು ಕರೆಯಬೇಕೇ? ಪಾಪ, ಈ ಬಡವೆ, ತಾನು ಚಾಕರಿ ಮಾಡುವ ಮನೆಯವರು ತನ್ನ ಬೇಸರ, ಕುದಿಯನ್ನು ಅರಿತು ಏನೂ ಸಿಕ್ಕುವಂತಿಲ್ಲ ಎಂದು ತಿಳಿದಿರಬೇಕು. ಅದರಿಂದಲೇ, ಅವರು ಕಾಣದಂತೆ ಈಕೆ ಅತ್ತಳು; ಅವರನ್ನು ಕಂಡಾಗ ನಕ್ಕಳು–ಮೈ ಮುರಿದು ದುಡಿದುದಕ್ಕೆ ತಕ್ಕ ಪಡಿಕೊಡಲು ಕೈಬಾರದ ದೊಡ್ಡವರನ್ನು ಈಕೆ ತನಗಿಂತಲೂ ಕೀಳೆಂದು ನೆನೆದು ಹಂಗಿಸಿ ನಕ್ಕಳೋ ಏನೋ.

ಅವಳು ಅಳಬೇಕಾದಾಗ ಅತ್ತಳು; ನಗು ಬಂದಾಗ ನಕ್ಕಳು: ಈ ಹಿರೇ ಮನೆತನದ ಹಿರಿಯರನ್ನು ಕಂಡು ಅವಳೇನು ಕುಣಿಯಬೇಕಿತ್ತೇನು? ಕುಣಿದರೂ ಹುಚ್ಚು ಎನ್ನಬಹುದೇ?

ಮನೆಯ ಮಕ್ಕಳು, ಗಂಡು ಹೆಣ್ಣು, ಎಲ್ಲರೂ ನಗುತ್ತಾರೆ, ಅಳುತ್ತಾರೆ: ಕೊನೆಗೆ ಕೆಲವೊಮ್ಮೆ ಕೋತಿಗಳಂತೆ ಕುಣಿಯುತ್ತಾರೆ—ಹಿಂದೂ ಮುಂದೂ!

೨

ನಾಲ್ಕೈದು ದಿನಗಳು ಸಂದುವು.

ನಮ್ಮ ಗೆಳೆಯರಲ್ಲಿ ಒಬ್ಬ ಇಲ್ಲಿನ ಒಂದು ಬ್ಯಾಂಕಿನಲ್ಲಿ ಗುಮಾಸ್ತನಾಗಿದ್ದಾನೆ. ಒಂದು ದಿನ ತಾನೊಂದು ಅಚ್ಚರಿ ಹೇಳುವೆನೆಂದು, ಸಂಜೆ ಕಚೇರಿಯ ಕೆಲಸ ಮುಗಿಸಿ ಮನೆಯ ಕಡೆಗೆ ಹೊರಟ ನನ್ನನ್ನು ಅಡ್ಡಗಟ್ಟಿದನು.

ಅಳಿದ ಊರಿಗೆ ಉಳಿದವನೇ ಗೌಡನೆಂಬುದು ಬರಿಯ ಗಾದೆಯ ಮಾತಲ್ಲ. ನಮ್ಮ ಊರಿನಲ್ಲಿ ಬರೆಹಗಾರರೆಂಬುವರು ಯಾರೂ ಇಲ್ಲ ಎನ್ನಬಹುದು. ನಾನು ಮಂಗಳೂರಿನಲ್ಲಿ ಓದುತ್ತಿದ್ದಾಗ ಒಂದೆರಡು ಸಣ್ಣ ಕತೆಗಳನ್ನು ಬರೆದು ಅಚ್ಚಿಗೆ ಕೊಟ್ಟಿದ್ದೆ. ಇದರಿಂದ ನಮ್ಮ ಊರಿನಲ್ಲಿ ನಾನು ದೊಡ್ಡ ಪಂಡಿತನಾಗಿದ್ದೆ. ಅದೇ ನಮ್ಮ ಗೆಳೆಯ ಅಣಕವಾಡಿದ, "ಏನು ಪಂಡಿತರೇ, ಎತ್ತ ಹೊರಟಿದೆ ಸವಾರಿ?"

"ಇನ್ನೇನು, ಹೊತ್ತಾಯಿತು, ಮನೆಯ ಕಡೆಗೆ—"

"ತಾಳಪ್ಪ, ಪಂಡಿತರೇ ಎಂದುದರಿಂದ ನಕಲಿ ಎಂದು ಸಿಟ್ಟಾಗಬೇಡ. ನಿನ್ನ ಮೋರೆ ನೋಡಿದರೆ ತುಂಬ ಬಾಡಿದ ಹಾಗುಂಟು . . . . ."

"ಇರಬಹುದು. ನಿನ್ನೆ ರಾತ್ರಿ ಕಾದಂಬರಿ ಓದುತ್ತ ನಿದ್ದೆಗಳೆದೆ, ಇಂದೀಗ ಕಣ್ಣು ಕೂರುವುವು."

"ಇರಲಿ. ನಿನಗೆ ಒಂದು ಫಸ್ಟ್‌ಕ್ಲಾಸ್ ಪ್ಲಾಟ್ ಕೊಡುತ್ತೇನೆ. ಅಚ್ಚರಿ ಎನಿಸುವಂತಹದಿದೆ. ನೀನು ಅದನ್ನು ರಂಗುಗೂಡಿಸಿ ಒಂದು ಕತೆಬರೆದುಬಿಡು"

ವ್ಹಾಂ!

ನಮ್ಮ ಗೆಳೆಯ ಇರುವುದು ಬ್ಯಾಂಕಿನಲ್ಲಿ; 'ನಿನಗೊಂದು ಫಸ್ಟ್‌ಕ್ಲಾಸ್ ಪ್ಲಾಟ್ ಕೊಡುತ್ತೇನೆ' ಎನ್ನುವಾಗ, ಎಲ್ಲಿ ಅಡವಿನ ಬಾಕಿಯಾದ ಜಮೀನು ಇದೆಯೋ ಎಂದು ನಾನು ತುಸು ಮೂಕನಾಗಿದ್ದೆ. ಎಲ್ಲಾದರೂ ಅಸಲು ಕಡಿಮೆಯಲ್ಲಿ ಸಿಕ್ಕಿದರೆ ಯಾರಿಗೆ ಬೇಡ? ಆದರೆ ಮುಂದಿನ ಮಾತು ಕೇಳಿದಾಗ ನನಗೆ ನಗು ಬರದಿರಲಿಲ್ಲ—ಒಂದು ಸಣ್ಣ ಒಳ್ನಗು ಎನ್ನಿ!

"ಪ್ಲಾಟ್ ಏನಪ್ಪಾ, ಒಮ್ಮೆ ಒಗೆದು ಬಿಡು—"

ಅನಂತು ಹೇಳಲು ತೊಡಗಿದ:

"ನೋಡು ರಾಮು, ನಮ್ಮ ಬೇಂಕಿನಲ್ಲಿ ಕರುಣ ಎಂಬೊಬ್ಬನಿದ್ದಾನೆ. ಎಂ. ಎ. ಆದವನು. ಈ ಬ್ಯಾಂಕಿನ ೫೦ ರೂಪಾಯಿ ಚಿಲ್ಲರೆ ಕಸಬಿಗೆ ಬಂದು ಬಿದ್ದಿದ್ದಾನೆ. ಇಲ್ಲಿ ಅವನಿಗೆ ಬೇಕಾದವರು ಯಾರೂ ಇಲ್ಲ. ಹೆಬ್ರಿಯವನಂತೆ.

ಕರುಣ ತನಗೆ ಮದುವೆ ಆಗಿಲ್ಲವೆಂದು ಹೇಳಿಕೊಳ್ಳುತ್ತಾನೆ. ಅವನಿಗೆ ಸಿಕ್ಕುವ ೫೦ ರೂಪಾಯಿ ಹೆಚ್ಚಾಯಿತು; ಮನೆಗೂ ಕಳಿಸಬೇಕಾಗಿಲ್ಲ. ಆದರೆ, ಅವನು ಗೆಲುವಿನಲ್ಲಿ ಇದ್ದುದನ್ನು ನೋಡದೆ ಬಹಳ ದಿನಗಳಾದವು. ಕೆಲಸದಲ್ಲಿ ಹುರುಪಿಲ್ಲ. ಯಾರೊಡನೆಯೂ ಚಕ್ಕಂದವಾಗಿ ಮಾತನಾಡಲಾರ.

ಮೊನ್ನೆ, ಅವನೇ ನನ್ನನ್ನು ಒತ್ತಾಯಪಡಿಸಿ ಗುಡ್ಡೆಯ ಕಡೆಗೆ ಸೆಳೆದೊಯ್ದನು. ಇಲ್ಲಿ ನಾವಿಬ್ಬರೂ ಒಂದು ಬಂಡೆಯ ಮೇಲೆ ಕುಳಿತೆವು. ಕರುಣ ತನ್ನ ಬೇಸರದ ನೆಲೆಯನ್ನು ಹೇಳಿದನು:

ನನಗೆ ಮದುವೆಯಾಗಿಲ್ಲ. ಮನೆಮಾರು ಎಲ್ಲವೂ ಉಂಟು; ತಂದೆ ತಾಯಂದಿರಿದ್ದಾರೆ ನಾನು ಎಂ. ಎ. ಆಗಿ ಕಸಬು ಮಾಡಿದೆ. ಯಾವ ಕಸಬಿಗಿಂತಲೂ ಬೇಂಕಿನ ಕಸಬು ನನಗೆ ಚೆನ್ನಾಗಿ ಕಂಡಿದೆ. ಸಂಜೆಯ ಹೊತ್ತು

ತುಸು ಪುರಸತ್ತು ಸಿಕ್ಕುತ್ತದೆ; ನಾವೂ ಬದುಕುವ ಪ್ರಾಣಿಗಳು, ಮೆಶೀನು ಗಳಲ್ಲ ಎಂಬುದನ್ನು ಮನವರಿಕೆ ಮಾಡಿಕೊಳ್ಳಲು ಬರುವುದು. ಇದಕ್ಕೆ ಮೊದಲು ನೋಡಿದ ಕಸಬುಗಳು ಆರೇಳು; ಎಲ್ಲಿಯೂ ಉಸಿರಾಡಲು ಎಡೆ ಸಿಕ್ಕದ್ದು ಇಲ್ಲ. ಒಂದು ಕಡೆ ಪ್ರೊಫೆಸರ್ ಆಗಿ ಮೂರು ತಿಂಗಳು ಕೆಲಸ ಮಾಡಿದೆ. ಅಂದು ಕಳೆದುಕೊಂಡ ನನ್ನ ಕೊರಳಿನ ದನಿ ಇನ್ನೂ ಬಂದಿಲ್ಲ. ಹ್ಯೂಮನ್ ವ್ಹೋಯ್ಸ್ ಎಂಬುದು ಎನಿತು ಅಗ್ಗವಾಗಿದೆ ಎಂಬುದನ್ನು ನಾನು ಆಗ ಅರಿತೆನು.

ನಾನು ಇಲ್ಲಿಗೆ ಬಂದು ಮೂರು ವರುಸಗಳಾದುವು. ಇಲ್ಲಿಗೆ ಬರ ಬೇಕಾದರೆ ಊರಿನಲ್ಲಿ ಒಂದು ಕಿತಾಬತಿ ನಡೆಯಿತು. ನನಗೆ ಮದುವೆ ಬೇಡ ವೆಂದರೂ ನನ್ನ ಹೆತ್ತವರು ಒಂದು ಹೆಣ್ಣನ್ನು ನೋಡಿ, ನನಗೆ ಒಡನೆ ಬರ ಬೇಕೆಂದು ಬರೆದರು. ತಾಯಿಯ ಒತ್ತಾಯಕ್ಕೆ ನಾನು ಮದುವೆಯಾಗಲು ಒಪ್ಪಿದೆ. ಆದರೆ ಆ ಹುಡುಗಿ ತುಸು ಗಡಸುಗಾತಿ, ಅಗಡು ಇದ್ದಂತೆ ತೋರು ವುದು. ತಾನು ಮದುವೆಯಾಗುವ ಗಂಡನನ್ನು ನೋಡಿ ತಾನೇ ಹೇಳುವೆ— ಎಂದಳಂತೆ.

ನಾನು ಹೋದೆ.

ನನ್ನನ್ನು ಕಂಡೊಡನೆ ಹುಡುಗಿ ಒಮ್ಮೆ ಮೆಲುನಗು ನಕ್ಕಳು. ಇನ್ನೊಂದು ಗಳಿಗೆಯ ಹೊತ್ತು ನನ್ನನ್ನು ಇದ್ದಕ್ಕಿದ್ದ ಹಾಗೆ ನಿಲ್ಲಿಸಿ, ಕುಳ್ಳಿರಲು ಕೂಡ ಹೇಳಲಾರದ ಮೂಕು ತಾಳಿದಳು. ಆಕೆ ನನ್ನನ್ನು ಹಾಗೆ ನೆಟ್ಟಗಣ್ಣಿ ನಿಂದ ನೋಡಿ ಏನು ನುಂಗಿಬಿಡುವಳೋ ಎಂದು ನನಗೆ ನಗುಬಂತು. ಹುಡುಗಿ ಮೇಲಿಂದ ಮೇಲೆ ನೋಡಿದರೆ, ಒಂದೂ ಅರಿಯದ 'ಬಾಲೆ'ಯಂತಿ ದ್ದಳು.

ಇದಾಗಿ ಒಂದು ನಿಟ್ಟುಸಿರುಗರೆದು ನನ್ನನ್ನು ಕುಳ್ಳಿರಲು ಹೇಳಿದಳು: ನನ್ನ ಜತೆಯಾಗಲಿ ಯಾರೂ ಓರಿಗೆಯವರು ಇರಲಿಲ್ಲ. ಹಿರಿಯರು ಕಿರಿಯರು ಒಬ್ಬರೂ ಇರಲಿಲ್ಲ. ನಾವಿಬ್ಬರೇ ಕುಳಿತು ಮಾತನಾಡಿಕೊಂಡೆವು; ಚಾ ಕುಡಿ ದೆವು. ಆಕೆ ಈ ಮಾತಿನ ಎಡೆಯಲ್ಲಿ ತಟ್ಟನೆ ಕೇಳಿದಳು:

"ತಾವು ಯಾವ ಕಸಬು ನಡೆಸುತ್ತಿದ್ದೀರಿ?"

ಇನಿಸು ಹೆಮ್ಮೆಯಿಂದ ಹಿಗ್ಗಿ ನುಡಿದೆ—"ಕಾಲೇಜಿನಲ್ಲಿ ಪ್ರೊಫೆಸರನಾಗಿ ದ್ದೇನೆ."

"ಏನೋ ಎಪ್ಪತ್ತೈದು ರೂಪಾಯಿ ಬರುತ್ತದೆ, ಅಲ್ಲವೇ?" ಎಂದಳು.

"ನಾನು ಈಚೆಗೆ ಸೇರಿ ಎರಡು ತಿಂಗಳಾದವು; ೭೫ ಸಿಕ್ಕುತ್ತದೆ—"

ಈ ಮಾತನ್ನು ಹೇಳುತ್ತಲೂ ನನಗೆ ತುಸು ಅಂಜಿಕೆ ಹುಟ್ಟಿತು. ಆಕೆ ಅದನ್ನು ಮತ್ತು ಸೇರಿಸಿ, ಹಂಗಿಸುವಂತೆ ಮಾತನಾಡಿದಳು. "ಇಂದಿನ ದಿನ ಮಾನದಲ್ಲಿ ನಿಮ್ಮ ೭೫ ರೂಪಾಯಿಯಿಂದ ಒಬ್ಬ ಹೆಂಡತಿಯನ್ನು ಕಟ್ಟಿಕೊಂಡು ಬಾಳ್ವೆ ಮಾಡಲು ಆದೀತೇನು?"

"ಆಕೆ ಹಂಗಿಸಿದಳು, ನನಗೆ ತಾಗಿತು, ನಿಜ; ಆದರೆ ಆಕೆಯ ಮಾತಿನ ಮೊನೆಯನ್ನು ನೋಡಿ ನನಗೆ ಅಚ್ಚರಿಯೆನಿಸಿತು. ನಾನು ಆದರೂ ಕುಂದದೆ ಹೇಳಿದೆ: "ಇಪ್ಪತ್ತು ರೂಪಾಯಿಯ ಗುಮಾಸ್ತೆ ಕೆಲಸಮಾಡಿಕೊಂಡು ಒಳ್ಳೆಯ ಬಾಳ್ವೆ ಮಾಡುವುದಿಲ್ಲವೇ?"

"ಉಡದೆ, ಉಣದೆ, ಬದುಕುವ ಜನರನ್ನು ನಾನು ಮೆಚ್ಚುವುದಿಲ್ಲ. ನಮ್ಮ ಮನೆತನ ಹಿರೇದು. ಅದರ ಮಟ್ಟಕ್ಕೆ ಯಾವ ಕುಂದೂ ಇಲ್ಲದಂತೆ ನಾನೂ ಉಳಿದವರೂ ನಡೆದುಕೊಂಡು ಬರಬೇಕಾಗಿದೆ. ನಾನು ಕಿನಕಾಪಿನ ಸೀರೆಯನ್ನಲ್ಲದೆ, ಬೇರೆ ಬಟ್ಟೆ ತೊಟ್ಟವಳಲ್ಲ. ನಿಮ್ಮ ಒಂದು ತಿಂಗಳ ಸಂಬಳ ನನಗೆ ಒಂದು ಸೀರೆ ಪರ್ಚೇಸ್ ಮಾಡಲು ಸಾಲದು. ಒಂದು ವರುಸಕ್ಕೆ ಆರೈದಾರು ಬೇಕೆಂದರೆ ಉಣ್ಣುವುದು ಹೇಗೆ? ನಿಮಗೆ ಬಟ್ಟೆಬರೆಗಳಾಗಬೇಡವೇ? ಚೆನ್ನಾಗಿ ಲೆಕ್ಕಮಾಡಿ—"

"ನಿಮ್ಮ ಲೆಕ್ಕ ನೀವು ಹೇಳುತ್ತಲೇ ನನಗೆ ಗೊತ್ತಾಯಿತು." ಎಂದು ನಾನು ಅವಳ ಎದುರಿನಿಂದ ಎದ್ದು ಹೊರಗೆ ಬಂದೆ. ಅಲ್ಲಿಗೇ ಆ ಹುಡುಗಿ ಬಿಡಲಿಲ್ಲ ತನ್ನ ತಂದೆಯನ್ನು ಕರೆದು ಹೊರಗೆ ಕುಳಿತಿದ್ದ ನನಗೆ ಕೇಳಿಸು ವಂತೆ ಹೇಳುತ್ತಿದ್ದಳು.

"ಅಪ್ಪಯ್ಯ, ನನ್ನ ಮದ್ವೆ ಮಾಡಿ ಮನೆಯಿಂದ ಹೊರ ನೂಕುವಾಗ, ನೀನು ಸುಮ್ಮನೆ ಆರೇಳು ಸಾವಿರ ರೂಪಾಯಿ ವೆಚ್ಚ ಮಾಡಬೇಕಾಗುತ್ತೋ ಇಲ್ಲೋ? ಅದೆಲ್ಲ ಕೊಟ್ಟು ನಾನು ಯಾರು ಯಾರ ಹಂಗಿಗೆ ಬೀಳುವುದಕ್ಕಿಂತ, ನನ್ನ ಲೆಕ್ಕದ ಹಣವನ್ನು ನನ್ನ ಹೆಸರಿಗೆ ಬ್ಯಾಂಕಿನಲ್ಲಿಡು, ಅದರ ಬಡ್ಡಿಯಿಂದ ನಾನು ಬದುಕಿಕೊಳ್ಳುತ್ತೇನೆ—"

ಹುಡುಗಿಯ ಈ ಹುಚ್ಚಾಟಗಳನ್ನು ಕಂಡು ಅವಳ ತಂದೆ ತುಂಬ ನೊಂದುಕೊಂಡರು. ನಮ್ಮನ್ನು ತಾಳ್ಮೆಗೊಳ್ಳಬೇಕೆಂದು ಬೇಡಿದರು. ನಾವು

ಬೇರೆ ಮಾತನಾಡದೆ ಅಲ್ಲಿಂದ ಹೊರಟು ಬಂದೆವು.

ಅಂದಿನಿಂದ ನಾನು ಮದುವೆ ಬೇಡವೇಂದೇ ಗಟ್ಟಿ ಮಾಡಿಕೊಂಡು ಇತ್ತ ಬಂದಿರುತ್ತೇನೆ. ಇದೇನು ದುಡ್ಡಿನ ಲೆಕ್ಕಾಚಾರಕ್ಕಾಗಿ ಅಲ್ಲ, ಒಬ್ಬ ಹೆಂಡತಿಯನ್ನು ಕಟ್ಟಿಕೊಂಡು ಬಾಳ್ವೆ ಮಾಡಲು ನನ್ನಿಂದ ಆಗಲಾರದು ಎಂಬ ಅಂಜಿಕೆಯಿಂದಲ್ಲ. ಒಟ್ಟಿನ ಮೇಲೆ ಆ ದಿನ ಆ ಹುಡುಗಿ ಹಂಗಿಸಿದುದು ನನ್ನ ಮೂಳೆಗೆ ನಾಟಿತ್ತು.

ಆದರೆ ಇಲ್ಲಿಗೆ ಬಂದ ಮೇಲೆ ನನ್ನ ಮನ ಮೈಗಳು ಹೆಣ್ಣನ್ನು ಬಯಸಿದುವು. ಚೆಲುವು ಒಲವು ನನ್ನ ಎದೆಯಲ್ಲಿ ಅರಳ ತೊಡಗಿತು.

ಇಲ್ಲಿ ನನಗೆ ಹೆಣ್ಣು ಕೊಡಲು ಹಲವರು ಮುಂದೆ ಬಂದವರಿದ್ದಾರೆ. ಇಲ್ಲಿ ಹಲವಾರು ಚೆಲುವೆಯರನ್ನು ನಾನು ಕಂಡು ಮರುಳಾಗಿದೇನೆ. ಆದರೆ ಯಾವ ಹೆಣ್ಣನ್ನೂ ನಾನು ಮದುವೆಯಾಗಲು ಸಿದ್ಧನಿಲ್ಲ; ಯಾರನ್ನೂ ನಾನು ಕೆಡಿಸಲಾರೆ.

ಈ ಹೊತ್ತಿಗೆ ನನ್ನ ಬಿಡಾರದ ನೆರೆಯಲ್ಲಿ ಒಬ್ಬ ಹೆಣ್ಣು ಮಗಳು, ಚಿನ್ನಕ್ಕ ಎಂದವಳ ಹೆಸರು, ತನ್ನ ತಾಯಿಯೊಂದಿಗೆ ಇದ್ದಳು. ಇಬ್ಬರೂ ಮನೆ ಮನೆ ದುಡಿದು ಬದುಕಿದಾರೆ.

ಚಿನ್ನಕ್ಕ ಚೆಲುವೆ. ನನ್ನ ಕಂಣಿಗೆ ಅಂದವಾಗಿ ಕಂಡಳು. ಅವಳಿಗೆ ಹಾಕಿಕೊಳ್ಳಲು ಒಳ್ಳೆಯ ಉಡಿಗೆ ತೊಡಿಗೆಗಳು ಇಲ್ಲ. ಹರಕು ಚಿಂದಿಯನ್ನು ಕಟ್ಟಿಕೊಂಡರೂ ಆಕೆಯ ಚೆಲುವಿಗೆ ಯಾವ ಕುಂದೂ ಹೇಳುವಂತಿಲ್ಲ: ಆಕೆಯ ಮೈಸಿರಿ, ಮೊಗದ ಕಟ್ಟು ಇವು ಯಾರೆದೆಯನ್ನಾದರೂ ಸೂರೆಗೊಳ್ಳುವಂತಹದೇ. ನಾನಂತೂ ಆಕೆಗೆ ಮನ ಸೋತೆನು.

ನಾನು ಆಕೆಯನ್ನು ಮದುವೆ ಆಗಬಹುದೇ ಎಂದು ಎಣಿಸುತ್ತಿರಲು, ನಾನು ಬೇರೆ ಮಾತುಗಳನ್ನು ಕೇಳಿದೆ: ಚಿನ್ನಕ್ಕ ಈ ಮೊದಲು ಎರಡು ಮದುವೆಯಾದವಳು. ನನಗೆ ಅಂಜಿಕೆಯಾಯಿತು. ಒಮ್ಮೆ ಮದುವೆಯಾದವಳನ್ನು ತಿರುಗಿ ಯಾರಾದರೂ ಮದುವೆ ಆಗಬಾರದೆಂದಲ್ಲ. ಆಕೆಯ ತಾಯಿ ತನ್ನ ಮಗಳನ್ನು ಯಾರೊಡನೆಯೂ ಹೆಚ್ಚು ದಿನ ಇರಲು ಬಿಟ್ಟುದಿಲ್ಲವಂತೆ. ಆದುದರಿಂದ ಮದುವೆಯ ಮಾತನ್ನು ನಾನು ಮುಂದಿಡಲಿಲ್ಲ.

ಹುಡುಗಿ ನನ್ನನ್ನು ಒಪ್ಪಿಕೊಂಡಳು ತಾಯಿಯೂ ಒಪ್ಪಿಕೊಂಡಳು. ಅವಳಿಗೆ ಒಂದು ಒಳ್ಳೆಯ ಸೀರೆ ತೆಗೆಸಿ ಕೊಟ್ಟೊಡನೆ ಎಲ್ಲ ಸರಿಹೋಯಿತು.

ನಾನು ಚಿನ್ನಕ್ಕನನ್ನು ನನ್ನವಳನ್ನಾಗಿ ಮಾಡಿಕೊಂಡೆ.

ಐದು ಸಾವಿರ ರೂಪಾಯಿ ಬ್ಯಾಂಕಿನಲ್ಲಿಟ್ಟು ಬಂದ ಬಡ್ಡಿಯಲ್ಲಿ ಆ ಗಡಸುಗಾತಿ ಉಡುವ ಸೀರೆಗಳಿಗಿಂತಲೂ ಒಳ್ಳೆಯ ಸೀರೆಗಳನ್ನು ತರಿಸಿ ಚಿನ್ನಕ್ಕನನ್ನು ಉಡಿಸಿದೆ; ಚಿನ್ನದ ಒಡವೆಗಳನ್ನು ಮಾಡಿಸಿ ಚಿನ್ನಕ್ಕನಿಗೆ ತೊಡಿಸಿದೆ. ಆಕೆ ಚಿನ್ನದ ಗೊಂಬೆ ಅನ್ನುವ ಹಾಗೆ ಸಿಂಗಾರ ಮಾಡಿದೆ. ಆಕೆಯನ್ನು ನನ್ನ ದೇವೀ ಎಂದು ಪೂಜಿಸಿದೆ.

ಆದರೆ ಏನು ಕೊಟ್ಟರೂ ಆ ಮುದುಕಿಗೆ ಸಾಲದು. ಇಂದಿನ ಈ ಬರಗಾಲದೆಡೆಯಲ್ಲೂ ಇವರಿಗೆ ಹೊಟ್ಟೆ ತುಂಬ ಉಣಿಸಿದ್ದು ನನ್ನ ತಪ್ಪೆಂದು ತೋರುತ್ತದೆ. ಮುದುಕಿ ಸೊಕ್ಕಿನಿಂದ ನನ್ನನ್ನು ಕಂಡಾಗಲೆಲ್ಲ ಪಿರಿಪಿರಿ ಮಾತನಾಡಲು ತೊಡಗಿದಳು.

ಮೊದಮೊದಲು ಚಿನ್ನಕ್ಕ ತನ್ನ ತಾಯಿಯ ಮಾತನ್ನು ಲೆಕ್ಕಿಸುವಂತೆ ಇರಲಿಲ್ಲ. ಬರಬರುತ್ತ ಅವಳದೂ ಸುರುವಾಯಿತು. ನನ್ನನ್ನು ಒಬ್ಬ ಗುಲಾಮನಂತೆ ಕಂಡಳು. "ನಾಯಿ" ಎಂತಲೇ ಇಬ್ಬರೂ ಕೂಡಿ ನನ್ನನ್ನು ಹಂಗಿಸಿದರು.

ಆದರೂ ನಾನು, ಹುಡುಗಿಗೆ ಎಳೆ ವಯಸ್ಸು, ಬಾಳ್ವೆಯ ಬಳಿಕೆಯಿಲ್ಲ ಎಂದುಕೊಂಡು, ಇವರ ಇರಿವ ಮಾತುಗಳನ್ನೆಲ್ಲ ತಾಳಿಕೊಂಡೆ.

ಹೀಗಿರುತ್ತ ಆಕೆ ಒಂದು ಗಂಡು ಮಗುವನ್ನು ಹೆತ್ತಳು.

ಬಸಿರಿಯಾಗಿ, ಹಡೆದು ಹಸೆ ಬಿಟ್ಟೇಳುವ ವರೆಗೆ ಏನೆಲ್ಲಾ ನನ್ನ ಕಡೆಯಿಂದ ನಡೆಯತಕ್ಕದಿದೆಯೋ ಅದನ್ನೆಲ್ಲ, ಒಬ್ಬ ಮದುವೆಯಾದ ಗಂಡ ತನ್ನ ಹೆಂಡತಿಗೆ ಕೊಡುವ ಮರ್ಯಾದೆಯಂತೆ, ಒಂದನ್ನೂ ಬಿಡದೆ ಸಲ್ಲಿಸಿದೇನೆ. ಸೀರೆ ಕುಪ್ಪಸವಾಗಿ, ತಿಂಡಿ ತಿನಸುಗಳಾಗಿ, ಮದ್ದು ಮಾಹಿತಿಯಾಗಿ ಚಿನ್ನಕ್ಕ ಹಸೆ ಬಿಟ್ಟು ಏಳುವುದರೊಳಗೆ ನಾನು ಮುನ್ನೂರು ರೂಪಾಯಿ ವೆಚ್ಚಮಾಡಿದೆ.

ಆದರೆ ಇದೆಲ್ಲ ಯಾವುದಕ್ಕೂ ಬಾರದ ಹಾಗೆ ಆಯಿತು. ತಾಯಿ ಮಗಳು ಕೂಡಿ ನನ್ನನ್ನು ಹಲವು ಬಗೆಯಾಗಿ ಪೀಡಿಸಲು ತೊಡಗಿದರು. ಊರವರ ಮನೆ ಬಾಗಿಲ ತೊತ್ತಾಗಿದ್ದವಳನ್ನು ಎಲ್ಲ ಮನೆತನದ ಹೆಂಗಸರ ಜತೆಗೆ ನಿಲ್ಲಿಸಿ, ಎಲ್ಲರಂತೆ ತಲೆಯೆತ್ತಿ ನಡೆಯಲು, ಮೂರು ಹೊತ್ತು ಹೊಟ್ಟೆ ತುಂಬ ಉಂಡು ನಲಿದಾಡಲು ಮಾಡಿದುದು ನನ್ನ ತಪ್ಪೇನು?

ಅವರ ಬಾಯಿಂದ ನಾನು ಮತ್ತೆ ಒಂದು ನಗೆ ಮಾತು, ಮರ್ಯಾದೆಯ ಮಾತನ್ನು ಕೇಳಲಿಲ್ಲ.

ನನಗೆ ಬದುಕಿನಲ್ಲಿ ಬೇಸರ ಹುಟ್ಟಿತು. ಅಮಲು ತೆಗೆದುಕೊಳ್ಳುವುದಕ್ಕೆ ತೊಡಗಿದೆ ಕೊನೆಗೆ ಇವರನ್ನು ನೋಡುವುದನ್ನೇ ಮರೆತುಬಿಟ್ಟೆ. ನನ್ನ ರೂಮನ್ನು ದೂರಕ್ಕೆ ಒಯ್ದು ಕೆಲವು ದಿನಗಳ ತನಕವಾದರೂ ಅಲ್ಲಿ ನೆಮ್ಮದಿಯಲ್ಲಿ ಇದ್ದೆ.

ಆದರೆ, ಅಲ್ಲೊಂದು ಕೂಸಿದೆಯಲ್ಲ! ನನ್ನ ನೆತ್ತರಿಗೆ ಹುಟ್ಟಿದೆ: ನನಗೆ ಅದರ ನೆನಪು ಆಗಾಗ ಉಂಟಾಗುತ್ತಿತ್ತು. ಮಾಡುವುದೇನು? ಅವರ ಹರಕು ಬಾಯಿಗಳಿಂದ ಏನೆಲ್ಲಾ ಕೇಳಬೇಕಾಗುವುದೆಂದು ನಾನು ಸುಮ್ಮನಿರುತ್ತಿದ್ದೆನು.

ಆ ಮುದುಕಿ ಬಿಡುವಳೇನು? ಆಕೆ ನನ್ನ ರೂಮಿನ ಪತ್ತೆ ಮಾಡಿದಳು. 'ನೀನೇಕೆ ಬರುವುದಿಲ್ಲ. ಕೂಸನ್ನು ನೋಡಿಯಾದರೂ ಹೋಗು—' ಎಂಬ ಉಪಚಾರದ ಒಂದು ಮಾತಾದರೂ ಆಕೆಯ ಬಾಯಿಂದ ಬರಲಿಲ್ಲ. ಅವರ ಬಿಡಾರಕ್ಕೆ-ಅದೊಂದು ಸಣ್ಣ ಗುಡಿಸಲು-ಹೋದರೆ ಅಲ್ಲಿ, 'ನೀನು ಉಂಡಿದಿಯಾ, ಆಸರು ತರಲೇ?' ಎಂದು ಕೂಡ ಈ ಮುದುಕಿ ಕೇಳುವವಳಲ್ಲ. ದುಡ್ಡಿನ ಲೆಕ್ಕಾಚಾರಕ್ಕೆ ಯಾವಾಗಲೂ ಮುಂದು. 'ಏನು ಈ ತಿಂಗಳು ಒಂದು ಚಿಕ್ಕಾಸನ್ನಾದರೂ ಕೊಡದೆ ಇಲ್ಲಿ ದೂರ ಬಂದು ಕೂತಿದೀಯಾ? ಒಳ್ಳೆಯ ಮಾತಿನಿಂದ ಅವಳಿಗೆ ಕೊಡುವುದನ್ನು ಕೊಟ್ಟುಬಿಡು—' ಎಂದು ನನ್ನ ರೂಮಿಗೆ ಬಂದು ಗದ್ದರಿಸತೊಡಗಿದಳು.

ನಾನು ಆ ಕೂಸನ್ನು ನೆನೆದು ತಿಂಗಳುಗಟ್ಲೆ ೩೦ ರೂಪಾಯಿ ಕಳಿಸುತ್ತಿದ್ದೆ. ಹೀಗೆ ತಿಂಗಳೆರಡು ಮೂರು ಕಳೆದರೂ ಚಿನ್ನಕ್ಕ ನನ್ನನ್ನು ನೋಡುವ ಆಸೆಯನ್ನು ತೋರ್ಪಡಿಸಲಿಲ್ಲ. ಮುದುಕಿ ಬಾ ಎಂದು ನನ್ನನ್ನು ಕರೆದುದಿಲ್ಲ. ಮತ್ತೆ ನಾನು ಕೊಡುವುದನ್ನು ರದ್ದು ಮಾಡಿದೆ.

ಕೆಲವು ದಿನಗಳೊಡನೆ ತಾಯಿ ಮಗಳಿಬ್ಬರೂ ತಿರುಗಿ ಮನೆ ಮನೆಗೆ ಚಾಕರಿ ಮಾಡಲು ಹೋಗುವುದನ್ನು ನೋಡಿದೆ. ನಾನು ಮೊದಲು ಬಿಡಾರ ಮಾಡಿಕೊಂಡಿದ್ದ ಮನೆಯ ನೆರೆಯವರು ಹೇಳಿದರು: 'ಹುಡುಗಿ ನಿನ್ನನ್ನು ಬಿಟ್ಟಿದಾಳಂತೆ!'

ನೋಡಪ್ಪ! ಹುಡುಗಿ ನನ್ನನ್ನು ಬಿಟ್ಟಳಂತೆ! ಆದರೆ ಮೊನ್ನೆಯವರೆಗೂ ಆ ಮುದುಕಿ ಕೂಸಿನ ನೆಪ ಹೇಳಿ ನನ್ನಿಂದ ಕಾಸು ಇಸುಕೊಂಡು ಹೋಗುತ್ತಿದ್ದಳು. ಈಗ ಬೇರೆ ಯಾರೋ ಒಬ್ಬನನ್ನು ತಂದು, ಮಗಳನ್ನು ಅವನಿಗೆ ಕೊಡುವ ಸಂಚು ನಡೆಸಿದಾಳೆ ಮುದುಕಿ. ಹುಡುಗಿ ಒಪ್ಪುವುದಿಲ್ಲವೆಂದು

ಕೇಳಿದೆ. ತಾಯಿ ಕಿರುಕುಳ ಮಾಡುತ್ತಿರುವುದನ್ನು ಆಕೆ ಸೈರಿಸಲಾರದೆ ಕಂಗೆಟ್ಟಿರಬೇಕು.

ಆ ಹುಡುಗಿಗೆ ಹುಚ್ಚು ಹಿಡಿದಿದೆ!

೩

“ಒಳ್ಳೆ ಪ್ಲಾಟ್! ಇದನ್ನು ಕತೆ ಮಾಡುವುದು ಹೇಗಪ್ಪಾ, ಅನಂತು? ಇದಕ್ಕೆ ಲೋಕಲ್ ಕಲರ್ ಎಲ್ಲಿಂದ ತರಲಿ?”

“ಲೋಕಲ್ ಕಲರ್ ಇಲ್ಲವಾದರೆ, ಮೇಲ್ ಕಲರ್ ಹಾಕೋ; ಅದು ನಿನ್ನ ಕೆಲಸ. ಪ್ಲಾಟ್ ಹೇಗೆ ಚೆನ್ನಾಗುಂಟೋ ಇಲ್ಲೋ ಹೇಳು........”

ಅದ್ಭುತ ರಮ್ಯ—ಅತ್ಯಾಶ್ಚರ್ಯಕರ—ವಿಚಾರ ಪ್ರಚೋದಕ ಪ್ಲಾಟ್, ವಂಡರ್‌ಫುಲ್!”

“ನಿನ್ನ ಮನಸಿಗೆ ಬಂದದ್ದು ಅನ್ನು—”

“ಸರಿ. ಅವಳಿಗೆ ಹುಚ್ಚು ಹಿಡಿಯಬೇಕಾದರೆ ಏನಾಯಿತ , ಅನಂತೂ? ಒಂದೋ ಆಕೆಯನ್ನು ಕರುಣ ಬಿಟ್ಟು ಹೋಗಿದ್ದಿರಬೇಕು; ಇದು ಹಾಗಲ್ಲ, ಆಕೆಯೇ ಆತನನ್ನು ದೂರಮಾಡಿ, ಬಿಟ್ಟಳು. ಆತನ ಮೇಲೆ ಅವಳಿಗೆ ಆಳವಾದ ಒಲವು ಇದ್ದಿದ್ದರೆ, ತನ್ನ ನಲ್ಲನು ಅಗಲಿದನೆಂದು ತನ್ನ ಮುಂದಿನ ಬಾಳನ್ನು ನೆನೆದು, ಹಳೆಯ ನೆನಹಿಂದ ಹಂಬಲಿಸಿ, ಊಟ ನಿದ್ದೆ ಬಿಟ್ಟು ತಲೆ ಕೆಡಿಸಿಕೊಂಡಿರಬೇಕು ಅಲ್ಲದೆ ಕನ್ನಡದಲ್ಲಿ ಕತೆ ಬರೆವಾಗ ಕತೆಯ ಒಳಗೇನೆಂದು ಹೇಳದಿದ್ದರೆ ನಮ್ಮ ‘ವಿಮರ್ಶಕ’ರಿಗೆ ಕತೆಯ ಹುರುಳಾಗಲಿ, ತಿರುಳಾಗಲಿ ಗೊತ್ತಾಗುವುದೇ ಇಲ್ಲ. ಎಂತಹ ಕತೆಗಳನ್ನಾದರೂ, ಈ ಕಾರಣದಿಂದ ಅವರು ‘ಬರೇ ಸಾಮಾನ್ಯ ಕತೆ’ ಎಂದುಬಿಡುತ್ತಾರೆ. ಈಗ ನೀನು ಹೇಳಿದ ಪ್ಲಾಟ್‌ನಲ್ಲಿ ಇರುವ ಹುರುಳೇನೆಂದು ನೀನು ಹೇಳದಿದ್ದರೆ ನಾನು ಕತೆಯನ್ನು ಹೆಣೆವುದಾದರೂ ಹೇಗೆ? ಈ ಕತೆಯ ಕೊನೆಯಲ್ಲಿ ‘ಚಿನ್ನಕ್ಕನ ನಲ್ಲ ತೀರಿಕೊಂಡನು; ಅದರ ದುಃಖದ ಹೆಚ್ಚಿಗೆಯಿಂದ ಆಕೆಗೆ ಹುಚ್ಚು ತಾಗಿತು.’ ಎಂದಾದರೂ ಹೇಳದಿದ್ದರೆ, ಕನ್ನಡದಲ್ಲಿ ಅದು ಕತೆಯಾಗುವುದಿಲ್ಲ. ಅಲ್ಲದೆ, ಒಬ್ಬ ಬಡವೆ ಹುಚ್ಚಿಯಾಗುವುದು ‘ಸಾಮಾನ್ಯ’; ದೊಡ್ಡ ಮನೆತನದಲ್ಲಿ ಹುಟ್ಟಿದ ಹೆಣ್ಣು ಮಗಳೊಬ್ಬಳು, ಬಡತನವೊದಗಿ, ಹುಚ್ಚಾದಳು, ಎಂದಾದರೂ ಹೇಳಿದರೆ ಅದು ‘ಅದ್ಭುತ ರಮ್ಯ’ವೆನಿಸುವುದು. ವಾಸ್ತವತೆ ಈ ಎರಡನೆಯದರಲ್ಲಿ ಹೆಚ್ಚು, ಅಲ್ಲವೇ ಅನಂತೂ?”

"ನಾನೇನು ನಿನ್ನ ಕತೆಗಳನ್ನು ದೂರಿಲ್ಲ; ಕತೆಗಳನ್ನು ಓದಿ ಮೆಚ್ಚುವುದಲ್ಲದೆ, ಅದು ಯಾರು ಬರೆದದ್ದು, ಹೇಗೆ ಬರೆದಿದೆ, ಏನು ಎಂದು ನಾನು ನೋಡುವುದೂ ಇಲ್ಲ, ಬೇಕಾಗಿಯೂ ಇಲ್ಲ............ನೀನು ಹೇಗೆ ಸರಿಹೋಗುತ್ತೋ ಹಾಗೆ ಬರೆ............"

"ಇದೊಂದು ಸಾಮಾನ್ಯ ಕತೆ, ಅನಂತು."

"ಹೋಗಲಿ," ಎಂದು ಅನಂತ ಬೇರೆ ಮಾತಾಡಿದ. ನಾವು ಮಾತನಾಡಿಕೊಂಡು ದಾರಿ ಉದ್ದಕ್ಕೂ ನಡೆದದ್ದೇ. ಕತ್ತಲೆ ತಲೆ ಹಾಕಿದ ಮೇಲೆಯೇ ತಿರುಗಿ ನೋಡಿದುದು: ಪೇಟೆ ಬಿಟ್ಟು ಎರಡೂವರೆ ಮೈಲು ಹೊರಗೆ ನಿಂತಿದ್ದೆವು!

ಅಂದು ನಾನು ಮನೆ ಸೇರುವಾಗ ಇರುಳು ಬಹಳವಾಗಿತ್ತು.

ನಳಿನಾ, ನಮ್ಮಾಕೆ, ಜಗಲಿಯಲ್ಲಿ ಸಣ್ಣದೊಂದು ಲಾಟಾನಿನ ಎದುರು ಕುಳಿತುಕೊಂಡು ಏನನ್ನೋ ಓದುತ್ತಿದ್ದಳು. ಆಕೆ ಓದುತ್ತಿದ್ದರೆ, ನಾನು ಎಂದೂ ಅಡ್ಡಿಮಾಡುವಂತಿಲ್ಲ. ಸದ್ದಿಲ್ಲದೆ ನನ್ನ ರೂಮಿಗೆ ಹೋಗಿ, ಅಂಗಿ ಚಲ್ಲಣಗಳನ್ನು ಕಳಚಿ ಹಾಕಿದೆ. ಬೇರೆ ಬಟ್ಟೆ ಹುಡುಕುವುದರೊಳಗೆ ಸಾಬೂನು ಕರಡಿಗೆ, ಬಾತ್ ಟವೆಲು ಮತ್ತು ಒಂದು 'ಅಡ್ಡ ಪಂಚು' ಇವನ್ನು ಹಿಡಿದುಕೊಂಡು, ನಳಿನಾ, ರೂಮಿನ ಬಾಗಿಲಲ್ಲಿ ನಿಂತಿದ್ದಳು.

"ಏನು ಇವೊತ್ತು ಹೊತ್ತಾಯಿತು?"

"ನಮ್ಮ ಅನಂತು ಸಿಕ್ಕಿದ. ಮಾತನಾಡುತ್ತ ನಡೆದಿದ್ದೆವು. ಪೇಟೆ ಬಿಟ್ಟು ಸುಮಾರು ಎರಡೂವರೆ ಮೈಲು ಹೋದದ್ದು ಗೊತ್ತೇ ಆಗಲಿಲ್ಲ."

"ಅಂತಹ ಮಾತೇನು ಬಂತು?"

"ಏನಿಲ್ಲ: ಅನಂತು ಕೆಲಸ ಮಾಡುವ ಬ್ಯಾಂಕಿನಲ್ಲಿ ಕರುಣ ಎಂಬೊಬ್ಬ ಇದ್ದಾನೆ. ಅವನು ಇಲ್ಲಿ ಎಲ್ಲಿಂದಲೋ ಬಂದಿರುವ ಚಿನ್ನಕ್ಕ ಎಂಬ ಹುಡುಗಿಯನ್ನು ಕೂಡಿಕೊಂಡು ಕೆಲವು ದಿನ ಬಾಳ್ವೆ ಮಾಡಿದ; ಹುಡುಗಿ ಮತ್ತು ಅವಳ ತಾಯಿ, ಮೊದಲು ಯಾರು ಯಾರ ಮನೆ ಬಾಗಿಲಲ್ಲಿ ಚಾಕರಿ ಮಾಡಿ ದುಡಿದು ತಿನ್ನುತ್ತಿದ್ದರು. ಇವನು ಆ ಹುಡುಗಿಯನ್ನು ಕೂಡಿಕೊಂಡ ಬಳಿಕ ಅವರು ಸೊಗಸಿನ ಬಾಳ್ವೆ ಮಾಡಿಕೊಂಡಿದ್ದರು. ಆದರೆ ಬಡವರು ಬಡವರು ಆಗಿಯೇ ಇರಬೇಕು ಎಂದು ಕೆಲವರು ಹೇಳುವ ಮಾತಿನಲ್ಲೂ ಹುರುಳುಂಟು ಅಲ್ಲವೇ ನಳಿನಾ?"

"ಇವೊತ್ತಿನ ಬಡವರು ತಾವು ಒಳ್ಳೆಯ ನೆಲೆಗೆ ಬರಬೇಕು ಎಂದು ಆಸೆ

ಪಡುತ್ತಿರುವುದು ಸಿರಿವಂತರ ಸೊಗಸು ಸೊಬಗುಗಳನ್ನು ನೋಡಿಯೇ. ಇವತ್ತು ದುಡ್ಡಿದ್ದವರನ್ನು ದೂರುವ ಬಡವರು, ನಾಳೆ ಮಾಡುವ ತಪ್ಪಾದರೂ ಏನು? ದುಡ್ಡಿದ್ದವರನ್ನು ಯಾವ ತಪ್ಪು ಮಾಡುವರೆಂದು ಇಂದು ಈ ಬಡವರು ದೂರುತ್ತಿರುವರೋ ಅದೇ ತಪ್ಪನ್ನು, ನಾಳೆ ಈ ಬಡವರು ಮಾಡುತ್ತಾರೆ. ಮೂರು ಹೊತ್ತು ಉಂಡು, ಅಂದವಾದ ಉಡಿಗೆ ತೊಡಿಗೆಗಳನ್ನು ಹಾಕಿ, ಸೊಗಸಾಗಿ ಬಾಳ್ವೆ ಮಾಡಲು ತೊಡಗಿದರೆಂದರೆ, ಇದ್ದುದಕ್ಕಿಂತಲೂ ಹೆಚ್ಚಿನ ಆಸೆ ಹುಟ್ಟುತ್ತದೆ. ಇಂದು ದುಡ್ಡಿದ್ದವರನ್ನು ದೂರುವವರು ಹೊಟ್ಟೆಗಿಚ್ಚಿನಿಂದ, ಕರುಬಿನಿಂದ ದುಡ್ಡಿದ್ದವರನ್ನು ಹಳಿಯುತ್ತಾರೆ........"

"ನೀನು ಹೇಳುವ ಮಾತು ನಿಜವೇ. ಆದರೆ ಇವೊತ್ತು ಬಡವರು ಮತ್ತು ಬಡಿದು ಹಾಕುವವರು ಎನ್ನುವುದೇ ಎರಡು ಜಾತಿಗಳು. ಇವು ಹೊಡೆದಾಡಿಕೊಳ್ಳುತ್ತವೆಯಲ್ಲವೇ?"

"ಆದರೂ ಸರಿಯೇ. ದುಡಿಮೆಗೆ ಪಡಿ ಸರಿತೂಕದಲ್ಲಿ ಕೊಡದಿದ್ದರೆ ತಪ್ಪು ಹೊರತು, ಸಿರಿವಂತರು ಬಡವರು ಎಂದಿಲ್ಲದಿದ್ದರೆ ಯಾವ ಕೆಲಸವೂ ನಡೆಯಲಾರದು. ಇಂದಿನ ದಿನಮಾನ ದುಡ್ಡಿನ ಮೇಲೆ ನಿಂತಿರುವಾಗ ಎಲ್ಲರ ಕೈಯಲ್ಲೂ ಒಂದೇ ಲೆಕ್ಕದಲ್ಲಿ ಆಸ್ತಿಯ ಹಂಚೋಣವಾದರೆ ಹೇಗಾದೀತೋ. ನನ್ನೆಣಿಕೆಯಲ್ಲಿ ಕೈವಾಡಕ್ಕೆ, ನೆಪ್ಪಿಗೆ ಆಗ ಬೆಲೆ ಕಡಿಮೆಯಾದೀತು. ಆದರೆ, ಒಟ್ಟಿನಲ್ಲಿ ಎಲ್ಲರಿಗೂ ಹಸಿವು ಒಂದೇ ಬಗೆಯಾಗಿರುವುದರಿಂದ ಅದನ್ನು ಹಿಂಗಿಸುವಲ್ಲಿ ಸಮತೂಕವಿದ್ದರೆ ಏನೂ ತೊಂದರೆಯಾಗಲಾರದು. ಒಬ್ಬನು ಉಂಡಿರುವಾಗ ಇನ್ನೊಬ್ಬನು ಹಸಿದಿರಬಾರದು."

"ನಳಿನಾ, ಇದು ಯಾವ ಇಸಂ ಹಿಡಕೊಂಡು ಮಾತನಾಡುತ್ತೀಯೇ?" ನನಗೆ ನಗು ಬಂತು; ನಳಿನಾ ನಗುತ್ತಾ ಅಂದಳು "'ಬದುಕಿಸಂ'. ಇರಲಿ, ಅನಂತು ಹೇಳಿದ ಕತೆಯನ್ನು ಕೇಳಿಕೊಂಡು ನೀವು ಮೂರು ಮೈಲು ನಡೆವಾಗ ನನ್ನ ನೆನಪಾದರೂ ಬರಬಾರದಾಗಿತ್ತೇ? ನಾನು ಒಬ್ಬಳೇ ಇಲ್ಲಿ ಹೇಗಿರಬೇಕು ಅನ್ನಿ."

ನಾನು ಅನಂತು ಹೇಳಿದ ಕತೆಯ ಕಟ್ಟನ್ನು ನಳಿನಿಯ ಮುಂದೆ ಬಿಚ್ಚಿದೆ. ನಳಿನಿ ಇದನ್ನು ಕೇಳಿದೊಡನೆ ನಕ್ಕಳು.

ನನಗೆ ಇದೇನು ನೋಜಿಗವೆಂದು ಮೊದಲು ತಿಳಿಯಲಿಲ್ಲ. ನಳಿನಿ ಅಂದಳು: "ನೀವು ಮಿಂದು ಬನ್ನಿ. ಊಟಕ್ಕೆ ಹೊತ್ತಾಯಿತು. ಉಣಲು ಕುಳಿತಾಗ ಎಲ್ಲ ಕತೆ ಹೇಳುತ್ತೇನೆ—"

ಈ ಮಾತು ನನಗೇನೂ ಅಚ್ಚರಿಯೆನಿಸಲಿಲ್ಲ. ಊರ ಪಾತ್ರ್ಯ ಏನಿದ್ದರೂ ನಮ್ಮ ಮನೆಯ ಹೆಣ್ಣುಮಕ್ಕಳಿಗೆ ಆಗಾಗ ರಿಪೋರ್ಟು ಆಗುತ್ತಲೇ ಇರುತ್ತದೆ. ಮನೆಯಲ್ಲಿ ಉಣಲು ತಂದು ಹಾಕುವವನು ಹಗಲೆಲ್ಲ ಹೊರಗೆ ಹೋಗಿ ದಣಿದು ಬರುವಾಗ ಅಡುಗೆ ತಯಾರಾಗದಿದ್ದರೂ ಪರವಾ ಇಲ್ಲ— ಅವರಿವರು ನೆರೆಮನೆಯವರೋ ಮನೆ ಮನೆ ಸುದ್ದಿ, ಚಾಡಿ, ತಕರಾರುಗಳನ್ನು ಒಯ್ದು ತಮ್ಮ ಬೇಳೆ ಬೇಯಿಸಿಕೊಳ್ಳುವ "ಮುಂಡೆ"ಯರೋ ಇದ್ದರೆ, ಊರಿನ ಸುದ್ದಿ ಏನುಂಟು ಎಂದು ತಿಳಿದುಕೊಂಡು, ಇನ್ನು ಯಾರಾದರೂ ಬರುವವರ ಹೋಗುವವರ ಮುಂದೆ ಈ ಸುದ್ದಿಗಳನ್ನು ಹೇಗೆ ಹೇಳುವುದು ಏನೆಂದು ತಲೆ ಕೆರೆದು ಬೆದಕುವುದರಲ್ಲಿಯೇ ಪ್ರೈಸುರೆಯುತ್ತಾರೆ. ನಳಿನಿಯೂ ಈ ಪಾಲಿಗೆ ಸೇರಿದ ವಳೆಂದು ನಾನು ಹೇಳಲಾರೆ; ಆದರೆ ನಮ್ಮ ಮನೆಯ ಚಾಕರಿ ಮಾಡುವವಳು ಅಂತಹ ಸುದ್ದಿ ಮುಟ್ಟಿಸುವ ಟಪ್ಪಾಲು ಆಗಿದ್ದಾಳೆ. ಅವಳ ಬಗಲಲ್ಲಿ ಇಂತಹದೇ ಸುದ್ದಿ ಇದ್ದೀತು, ಇಂತಹದು ಇರಲಾರದು ಎನ್ನುವುದಕ್ಕಿಲ್ಲ. ವಾಯಿ ಖಾನೆಯಿಂದ ಹಿಡಿದು ಅರಮನೆಯ ವರೆಗೂ ಉಂಟು.

ನಾನು ಮಿಂದುಟ್ಟು ಬರಲು, ನಳಿನಾ ಅನ್ನಬಡಿಸಿ ತಯಾರು ಮಾಡಿದ್ದಳು. ನಾವಿಬ್ಬರೂ ಒಟ್ಟಿಗೆ ಕುಳಿತು ಉಣತೊಡಗಿದೆವು. ನಳಿನಾ ಕತೆ ಹೇಳಿದಳು:

"ನೀವು ಅನ್ನುವ ಕತೆ ಚಿನ್ನಕ್ಕ ಎಂಬ ಒಬ್ಬ ತೆಲುಂಗ ಹುಡುಗಿಯದು. ಅವಳು ತನ್ನ ತಾಯಿಯೊಂದಿಗೆ ಇತ್ತ ಬಿಕ್ಕೆ ಎತ್ತಿಕೊಂಡು ಬಂದಳಂತೆ. ವೈಜಾಗ್‌ನ ಹತ್ತಿರದ ಒಂದು ಹಳ್ಳಿಯಲ್ಲಿ ಇದ್ದರು; ನೆರೆಯ ಹಾವಳಿಯಿಂದ ಬರಗಾಲ ಬಂದುದರಿಂದ ಹೀಗೆ ಅಂಡಲೆದು ಬಂದರು. ಈಗ್ಗೆ ನಾಲ್ಕು ವರುಸಗಳಾದುವಂತೆ"

"ಇದನ್ನು ನಿನಗೆ ಯಾರು ಹೇಳಿದರು?" ನಾನು ನಡುವೆ ಕೇಳಿದೆ.

"ಚಾಕರಿಯವಳು!"

"ಸರಿ, ಮುಂದೆ?"

"ಆ ಮುದುಕಿ ತನ್ನ ಮಗಳನ್ನು ತೋರಿಸಿಕೊಂಡು ಬಂದು ಕಂಡಕಂಡವರೊಡನೆ ಕಾಸು ಇಸುಕೊಳ್ಳುತ್ತಿದ್ದಳು ಹಲವು ಊರುಗಳಂತೆ, ಈ ಹುಡುಗಿ ಹಲವರನ್ನು ಗಂಡಂದಿರೆಂದು ಕಂಡಿದ್ದಳು ಆದರೆ, ಈ ಊರಲ್ಲಿ ಮುದುಕಿಯ ಈ ಕಸಬು ನಡೆಯಲಿಲ್ಲ. ಪೋಲಿಗಳು ಬಂದು ತೊಂದರೆ ಮಾಡಲು ತೊಡಗಿದರು. ಈಗ ಹುಡುಗಿಗೂ ತುಸು ತಿಳಿವು ಹುಟ್ಟಿದೆ, ಈ

ಮುದುಕಿಯು ಸಂಚಿಗೆ ಒಳಗಾಗುತ್ತಿರಲಿಲ್ಲ. ಇಲ್ಲಿ ಅವರು ಮನೆಮನೆ ಚಾಕರಿ ಮಾಡುತ್ತಿರುವಂತೆಯೇ ಕರುಣ ಎಂಬವನು, ನೀವು ಹೇಳಿದರಲ್ಲ, ಗಂಟು ಬಿದ್ದನು. ಆದರೆ ಈ ಬಾರಿ, ಚಿನ್ನಕ್ಕ ತನ್ನ ತಾಯಿಯು ಒತ್ತಾಯದ ಪೀಡೆಗೆ ಒಳಪಟ್ಟು ಕರುಣನನ್ನು ಒಪ್ಪಿದ್ದಲ್ಲ. ಆಕೆಗೆ ಅವನ ಮೇಲೆ ಮನಸ್ಸಾಗಿತ್ತಂತೆ. ಅವನೊಂದಿಗೆ ಕೂಡಿ ಬಾಳ್ವೆ ಮಾಡುವ ಇಚ್ಛೆ ಆಕೆಯು ಎದೆಯಲ್ಲಿ ಇಂದಿಗೂ ಉಂಟು—"

ನಾನು ಮಾತಾಡದೆ ಉಣ್ಣುತ್ತಿದ್ದೆ. ನಳಿನಾ ಉಣಲೆಂದು ಎತ್ತಿಕೊಂಡ ತುತ್ತನ್ನವನ್ನು ಕೈಯಲ್ಲೇ ಹಿಡಿದುಕೊಂಡು ಕತೆ ಹೇಳುತ್ತಿದ್ದಳು:—

"ಆದರೆ ಅವಳು ತನ್ನ ತಾಯಿಯು ಮಾತು ಕೇಳಿ ಕರುಣನನ್ನು ಸುಲಿಗೆ ಮಾಡಲು ಎತ್ತಿದ ಹಂಚಿಕೆಗಳು ಪೂರಾ ಬಿದ್ದುಹೋದವು. ಕರುಣ ಹೆಂಡ ಕುಡಿಯಲು ತೊಡಗಿದನಂತೆ. ಹುಡುಗಿಯು ಕಡೆ ಕಣ್ಣೆತ್ತಿ ನೋಡುವುದನ್ನೂ ಮರೆತನು. ಈಚೆಗೆ ಚಿನ್ನಕ್ಕ ತನ್ನ ತಪ್ಪನ್ನು ತಿಳಿದುಕೊಂಡಿರಬೇಕು. ಆದರೆ ಆ ಮುದುಕಿಯೊಂದಿಗೆ ಇರಲು, ಕರುಣ ಒಪ್ಪುವುದಿಲ್ಲವಂತೆ. ತಾಯಿಯನ್ನು ಬಿಟ್ಟು ಚಿನ್ನಕ್ಕ ಇರಲಾರಳು. ಹೀಗೆ ಸಿಕ್ಕಿನಲ್ಲಿ ಬಿದ್ದಿದ್ದಾಳೆ . . . ಇದರ ಜತೆಗೆ ಆ ಮುದುಕಿ ತಾಯಿ, ತನ್ನ ಮಗಳಿಗೆ ಬೇರೊಬ್ಬ 'ಗಂಡ'ನನ್ನು ಕಂಡುಹಿಡಿದಳು. ಇದು ಇನ್ನೂ ಹೆಚ್ಚಿನ ಕಿರುಕುಳಕ್ಕೆ ಎಡೆಯಾಯಿತು. ಹುಡುಗಿ ಬೇಸತ್ತು ಬೆಂಡಾಗಿದ್ದಾಳೆ. ಅವಳಿಗೆ ಹುಚ್ಚೇನಲ್ಲ, ಈ ಒಗಟಿನಿಂದ ಬಿಡುಗಡೆ ಮಾಡಿ ಆಕೆಯು ಮನಸ್ಸಿಗೆ ನೆಮ್ಮದಿಯಾಗುವಂತೆ ನೆರವಾಗುವವರು ಯಾರೂ ಇಲ್ಲ. ಅವಳು ಅದರಿಂದ ಕಂಗೆಟ್ಟಿದ್ದಾಳೆ—"

"ಇದು ಚಿನ್ನಕ್ಕನ ಕತೆ!" ಎಂದು ನಾನು ತಳಿಗೆಯಲ್ಲಿದ್ದ ಕೊನೆಯ ತುತ್ತನ್ನು ಬಾಯೊಳಕ್ಕೆ ತುರುಕಿ ಒಂದು ಲೋಟ ಬಿಸಿನೀರು ಕುಡಿದೆ. ನಳಿನ ಇನ್ನೂ ಉಣದೇ ಇದ್ದಳು ಅವಳೂ ತನ್ನ ಕೈಯಲ್ಲಿ ಒಣಗುತ್ತಿದ್ದ ತುತ್ತನ್ನು ಬಾಯಿಗೆ ಕೊಂಡುಹೋದಳು. ನಾನು ಹೇಳಿದೆ: "ಆದರೆ ಹುಡುಗಿ ಕರುಣನನ್ನು ತಾನೇ ಇನ್ಕಾರು ಮಾಡಿಬಿಟ್ಟಳಂತೆ. ಊರಲ್ಲಿ ಹಾಗೆ ಹೇಳುತ್ತಿದ್ದರು—"

"ಸುಳ್ಳು. ಅದು ಅವಳ ತಾಯಿಯು ಕಿತಾಬತು. ಅವಳು ಹಾಗೆಂದು ಸುದ್ದಿ ಹರಡಿರಬೇಕು."

"ಹಾಗಾದರೆ, ಅನಂತು ಹೇಳುತ್ತಿದ್ದ, ಮೊನ್ನೆಮೊನ್ನೆಯವರೆಗೂ ಕರುಣನಿಂದ ಆ ಮುದುಕಿ ಆಗಾಗ ಖರ್ಚಿಗೆ ಬೇಕೆಂದು ಕಾಸು ಇಸುಕೊಂಡು

ಬರುತ್ತಿದ್ದಳಲ್ಲ?.......”

“ಹಾಗೆ ಯಾರು ಯಾರಿಂದೆಲ್ಲ ಆ ಮುದುಕಿ ಬೇಡುವಳೋ ಏನೋ!”

“ಊರಲ್ಲಿ ಆಕೆಗೆ ಹುಚ್ಚು ತಾಗಿದೆ ಎಂಬ ಸುದ್ದಿ ಹರಡಿದುದು ಇದೇ ಏನು?......”

ನಳಿನಾ ಮಾತನಾಡಲಿಲ್ಲ. ನಾವು ಉಂಡು ಎದ್ದೆವು.

ಮಾರನೆಯ ದಿನ ಅನಂತು ಹೇಳಿದ: “ಕರುಣನಿಗೆ ಹಂಗಿಸಿದ ಹೆಣ್ಣಿದ್ದಾಳಲ್ಲ? ಅವಳನ್ನು ಕರುಣನಿಗೆ ತಂದುಕೊಳ್ಳುವುದೆಂದು ಗೊತ್ತಾಗಿದೆ. ಹುಡುಗಿಯ ಅಣ್ಣ ಯಾವುದೋ ಒಂದು ಮೊಕದ್ದಮೆಯಲ್ಲಿ ಸಿಕ್ಕು ಈ ಹುಡುಗಿಯ ಬ್ಯಾಂಕಿನ ಹಣವೂ ವೆಚ್ಚವಾಗಿ ಮನೆಮಾರೂ ಅಡವಾಯಿತಂತೆ. ಈಗ ಹುಡುಗಿ ತಾನೇ ಕರುಣ ತನಗೆ ಗಂಡನಾಗಬೇಕೆಂದು ಹಟ ಹಿಡಿದಳು. ಆದರೆ ಕರುಣ ಒಂದು ಕಂಡೀಶನ್ ಹೇಳಿದ: ‘ನಾನು ಯಾರನ್ನಾದರೂ ಬೇರೆ ಹೆಂಗಸನ್ನು ತನ್ನವಳೆಂದು ತಂದರೆ ಅದಕ್ಕೆ ಎದುರಾಡಬಾರದು.’ ಇದಕ್ಕೆ ಅವಳೂ ಅವಳ ತಂದೆಯೂ ಒಪ್ಪಿದರು!”

“ಇದು ಈಗ ನಿನ್ನ ಪ್ಲಾಟ್ ತುಸು ರಮ್ಯವಾಯಿತು; ರೋಮಾನ್ಸ್ ಉಂಟು ನೋಡು!”

“ಅದೆಲ್ಲ ಬಿಡು, ರಾಮು; ಮುಂದಿನ ತಿಂಗಳು ಕರುಣನ ಮದುವೆ ಅವನ ಊರಲ್ಲಿ ನಡೆಯುತ್ತದೆ. ಚಿನ್ನಕ್ಕ ತಾನು ತನ್ನ ತಾಯಿಯನ್ನು ಬಿಟ್ಟು ಕರುಣನ ಒಂದಿಗೆ ಮನೆಯ ಚಾಕರಿ ಮಾಡುತ್ತಾ ಇರುತ್ತೇನೆಂದು ಅವನ ಕಾಲಿಗೆ ಬಿದ್ದು ಅತ್ತಳು.”

“ಅವನು ಒಪ್ಪಿದರೆ ಕತೆ ಮುಗಿಯಿತು–” ಎಂದು ನಾನು ನಗೆಯಾಡಿದೆ. ಅನಂತು ಕೂಡ ನಕ್ಕನು–“ಕರುಣ ಚಿನ್ನಕ್ಕನೊಂದಿಗೆ ತನ್ನ ಊರಿಗೆ ಹೋದ! ಆ ಮುದುಕಿ, ತನ್ನ ಮಗಳ ಕೂಸನ್ನು ಎತ್ತಿಕೊಂಡು ಹುಚ್ಚಿಯಂತೆ ಬೀದಿ ಬೀದಿ ಓಡಾಡುತ್ತಿದ್ದಳು. ನಮ್ಮ ಕಚೇರಿಯ ಹಿಂದುಗಡೆ, ನೆರೆಯ ಹೆಂಗಸರು ಕೂಡಿ ಮಾತನಾಡಿಕೊಳ್ಳುತ್ತಿದ್ದರು: “ಚಿನ್ನಕ್ಕನಿಗೆ ಅಲ್ಲ ಹುಚ್ಚು; ಅವಳ ತಾಯಿ, ಆ ಮುಪ್ಪಿನ ಅಜ್ಜವ್ವಗೆ!”

ಇವರ ಮಾತಿನಲ್ಲಿ ಒಂದು ಅಣಕದ ನಗೆಯೂ ಬೆರಸಿತ್ತು.

---

# ತಿರುಪೆಯ ಹೆಣ್ಣು

ಒಂದು ದಿನ ನಮ್ಮ ಮನೆಯ ಬಾಗಿಲಿಗೆ ತಿರುಪೆಯವಳೊಬ್ಬಳು ಬಂದಳು. ಬಗಲಲ್ಲಿ ತೂಗಿದ ಜೋಳಿಗೆಯಲ್ಲಿ ಸುಮಾರು ಹತ್ತು ಹನ್ನೊಂದು ತಿಂಗಳು ವಯಸ್ಸಿನ ಕಿರುಗೂಸೊಂದು ಪವಡಿಸಿತ್ತು. ಆಕೆ ಇನ್ನೊಂದು ಜೋಳಿಗೆಯನ್ನು ತನ್ನ ಹೆಗಲಲ್ಲಿ ಹಾಕಿಕೊಂಡಿದ್ದಳು. "ಹಸಿವಾಗ್ತದೆ ತಾಯಿಾ, ಒಂದೀಟು ಗಂಜೀನೀರು ಕೊಡಿ—" ಎಂದು ಆಕೆ ಅಳಲಿನ ದನಿ ತೆಗೆದಳು. ಮಲಯಾಳಿ ಹೆಣ್ಣು; ಕನ್ನಡದಲ್ಲಿ ಮಾತನಾಡಿದಳು. ಅದೊಂದು ಸೋಜಿಗ. ಅವಳ ಮಲಯಾಳೀ ದನಿ ಕೇಳಿ ಯಾರೆಂದು ನೋಡಿದೆ.

ಇವಳು ಜಾಡಿನ ಮನೆಯಿದ್ದಂತೆ ಕಂಡಳು. ಕೈಕಾಲುಗಳಿಗೆ ಅಲ್ಲಿಗಲ್ಲಿಗೆ ಆಸ್ಪತ್ರೆಯ ಬೇಂಡೇಜುಗಳನ್ನು ಸುತ್ತಿದ್ದಳು; ಎರಡು ಹರಕು ತುಂಡು ಚಿಂದಿಗಳಿಂದ ತನ್ನ ಮೈಯನ್ನು, ನಾಚಿಕೆಯನ್ನು ಹೊದೆದು ಮುಚ್ಚಿದ್ದಳು. ಮೈ ಮೊಗಗಳು ಜಾಡಿನ ಕುಡಿ ಎತ್ತಿಹಿಡಿದಂತೆ ಬಾತುಕೊಂಡಿದ್ದವು. ಮೊದಲೇ ಕಪ್ಪಗಿನ ಕಾಳೆ, ಅವಳು ಕೊಂಡ ಜಾಡಿನಿಂದ ಇನ್ನೂ ಹೇಸಿಗೆಯಾಗಿ ತೋರುತ್ತಿದ್ದಳು.

ಆದರೂ ಆಕೆಯನ್ನು ಕಂಡರೆ ಯಾರಿಗಾದರೂ ಕಳವಳ ಹುಟ್ಟಬೇಕು. ಅವಳು ತನ್ನೊಂದಿಗೆ ಕೂಡಿಕೊಂಡ ಕೂಸೊಂದಿದೆಯಲ್ಲ—ಅದನ್ನು ನೆನೆದಾದರೂ ಕಂಡವರು ಕಾಸು, ರುವಿ ಕೊಡುತ್ತಾರೆ; ಮನೆಯ ಹೆಣ್ಮಕ್ಕಳು ಕಳಕಳಿಯಿಂದ ಗಂಜಿನೀರನ್ನು ಬಡಿಸುತ್ತಾರೆ.

ಅವಳನ್ನು ಕಂಡು ನನಗೇ ಬೇಸರವಾಯಿತು. ನಾನು ಕೇಳಿದೆ— 'ನೀನು ಯಾಕೆ, ನಿನ್ನ ಈ ಜಾಡನ್ನು ಎತ್ತಿಕೊಂಡು ಮನೆಮನೆ ಅಲೆಯುತಿದ್ದೀ? ಆಸ್ಪತ್ರೆಯಲ್ಲಿ ಇದ್ದುಬಿಡಬಾರದೇ? ನೆಟ್ಟಗಾದ ಮೇಲೆ ಯಾರ ಮನೆ ಬಾಗಿಲಲ್ಲಾದರೂ ದುಡಿದು ತಿನ್ನಬಹುದು.'

"ಆಸ್ಪತ್ರೆಯಲ್ಲಿ ಮದ್ದು ಕೊಡುವುದಿಲ್ಲ—"

"ಸರಕಾರಿ ಆಸ್ಪತ್ರೆ ಎಂದು ನಾನು ಹೇಳಿದ್ದು. ಅಲ್ಲಿ ನಿನಗೆ ಮದ್ದು ಕೊಡುವುದಿಲ್ಲ ಎಂದವರಾರು? ನಾನು ನಿನ್ನನ್ನು ಅಲ್ಲಿ ಇನ್-ಪೇಶಂಟಾಗಿ ಸೇರಿಸುತ್ತೇನೆ. ನಾಳೆ ಬರುತ್ತೀಯಾ? . . ."

"ಅವರನ್ನು ಕೇಳಬೇಕು—"

'ನಿನಗೆ ಗಂಡನೂ ಇದ್ದಾನೆಯೆ? . . . .' ಎಂದು ನಾನು ಅಚ್ಚರಿಯಿಂದ ಕೇಳಿದೆ. ಅವಳು ತಲೆ ತಗ್ಗಿಸಿದಳು. ನನ್ನ ಎಣಿಕೆ ಬೇರೆಯಾಗಿತ್ತು. ಇವಳು ಹಡೆಯುವ ಸುಮಾರಿಗೆ ಗಂಡ ತೀರಿಕೊಂಡು, ಸಂಕಟಕ್ಕೆ ತುತ್ತಾದ ಬಡವೆ ಇರಬೇಕೆಂದು ನಾನು ಸಹಜವಾಗಿ ಎಣಿಸಿದ್ದೆ. ಆ ಹೊಳಹು ಈಕೆಯ ಮಾತಿನಿಂದ ಮಸುಳಿತು. ಮತ್ತೆ ಕೇಳಿದೆ:—'ಹಾಗಾದರೆ ನೀನೇಕೆ ತಿರುಪೆ ಎತ್ತಬೇಕು? ಅವನು ತಂದು ಹಾಕುವುದಿಲ್ಲವೇ? . . . .'

"ಇಲ್ಲ" ಎಂದು ಅವಳು ಮೆಲ್ಲನೆ ಅಂದಳು.

ನನಗೆ ಇನ್ನೂ ಅಚ್ಚರಿ ಉಂಟಾಯಿತು. ನಾನು ತಿರುಗಿ ಕೇಳಿದೆ— 'ಏನನ್ನೂ ತಂದುಕೊಡುವುದಿಲ್ಲವೇ?'

"ಇಲ್ಲ, ನಾನು ಈ ಕೂಸನ್ನು ಎತ್ತಿಕೊಂಡು ನಿಮ್ಮಂತವರ ಮನೆ ಬಾಗಿಲ್ಲಲ್ಲಿ ನಿಂತು ಬೇಡಿ ನಾಲ್ಕು ಕಾಳನ್ನೋ ಕಾಸನ್ನೋ ಕೂಡಹಾಕಿದರೆ ಎರಡಕ್ಕೂ ಕೈಚಾಚುವರು. ನಿಮ್ಮಂತವರು ಯಾರಾದರೂ ನನ್ನ ಪಾಡು ನೋಡಿ ಒಂದು ಚೂರು ಗಂಜಿ ನೀರಿಟ್ಟರೆ ಅದು ನನ್ನ ಹೊಟ್ಟೆಗೆ ದಕ್ಕಿತು. ಅದಿಲ್ಲದಿದ್ದರೆ ಈ ಕೂಸಿಗೆ ಮೊಲೆಯುಣಿಸುವ ಹಾಗೂ ಇಲ್ಲ . . . . ಮನೆಯಲ್ಲಿ ಅಡಿಗೆ ಮಾಡಿದರೆ ಅದು ಅವರ ಪಾಲಿಗೇ ಹೋಯ್ತು! . . . "

"ಅವನಿಗೆ ಏನು ಕಸುಬು?'

"ಇಲ್ಲೆ ಕಲ್ಲುಕಟ್ಟುವ ಕೆಲಸ. ದಿನಕ್ಕೆ ಎರಡು ಮೂರು ರೂಪಾಯಿ ಸಿಕ್ಕುತ್ತದೆ. ಒಂದೊಂದು ಸಾರಿ ನನ್ನ ಕೈಯ್ಯಲ್ಲೇನಾದರೂ ಬಚ್ಚಿಟ್ಟಿದ್ದು ಇದ್ದರೆ ಅದನ್ನೆಲ್ಲ ದೋಚಿಕೊಂಡು ಹೋಗುತ್ತಾರೆ . . . . ."

'ಅವನು ಹೆಂಡ ಕುಡಿಯುತ್ತಾನೇನು?'

"ಬರಿಯ ಹೆಂಡವಾಗಿದ್ದರೆ ಸೈರಿಸಬಹುದಿತ್ತು. ಆದರೆ ಅವರಿಗೆ ಎಲ್ಲಾ ಜಾತಿಯ ಅಮಲೂ ಬೇಕು . . . . ."

'ನಿನಗೆ ಅವನಿಂದ ಏನು ಸೊಗಸೋ . . . . . ಹೀಗಿದ್ದೂ ಮತ್ತೇಕೆ ಅವನನ್ನು ಕಟ್ಟಿಕೊಂಡಿರುವೆ? ನಿಮ್ಮವರಲ್ಲಿ ಹಲವು ಬಾರಿ ಮದುವೆಯಾಗ ಬಹುದಲ್ಲ, ಬೇಕಾದರೆ? ಬೇರೆ ಯಾರಾದರೂ ಒಳ್ಳೆಯವರನ್ನು ಕೂಡಿಕೊಳ್ಳು ವುದು ಒಳ್ಳೆಯದಲ್ಲವೇ? . . . . .'

"ಹಾಗೆ ಒಮ್ಮೆ ಇವರನ್ನು ಬಿಟ್ಟು ಬೇರೊಬ್ಬರನ್ನು ಕೂಡಿಕೊಂಡೆ.

ಇವರು ನಮ್ಮಿಬ್ಬರನ್ನೂ ಪೆಂಕುಳಿ ನಾಯನ್ನು ಹೊಡೆವಂತೆ ಬಡಿದು ಹಾಕಿದರು. "ಅವನ ಸಂಗಡ ಹೋದರೆ ಕೊಂದೇನು!" ಎಂದು ನನ್ನನ್ನು ಸೆಳೆದುಕೊಂಡು ಬಂದು ತಿರುಗಿ ತನ್ನೊಂದಿಗೆ ಇರಿಸಿಕೊಂಡಿದ್ದಾರೆ. ಆ ಹೊಸಬ ಇವರ ಕೈಯ ಪೆಟ್ಟು ತಿಂದು, ಪಾಪ, ಓಡಿಹೋದನು—"

ಇವಳ ಕತೆಯನ್ನು ಕೇಳುವಾಗ ನಗು ಬರುತ್ತಿತ್ತು. ನಾನು ಕೇಳಿದ ಮಾತಿಗೆಲ್ಲ ಕಪಡಿಲ್ಲದೆ ಮರುಪಡಿ ಕೊಡುತ್ತಿದ್ದಳು. ನನಗೆ ಅದರಿಂದ ಆಕೆಯ ಬಾಳನ್ನು ಕುರಿತು ಇನ್ನೂ ಹೆಚ್ಚು ಅರಿತುಕೊಳ್ಳಬೇಕೆನಿಸಿತು. ನಾನು ಕೇಳಿದೆ-

'ನಿನ್ನ ಬಗಲಲ್ಲಿರುವ ಕೂಸು ಇವನು ಹರಸಿದ್ದೆಂದು ತೋರುತ್ತದೆ, ಅಲ್ಲವೆ? . . . . .'

"ಹೌದು. ಇದನ್ನು ಸಾಕುವುದಕ್ಕೂ ನಾನೇ ತೊಂಡು ತೊಳೆಯಬೇಕು. ಮೂರುಕಾಸಿನ ಒಂದು ಮೊಳ ಪಟ್ಟೇ ನೂಲನ್ನಾದರೂ ಇದರ ನೊಂಟಕ್ಕೆ ಅವರು ಹಾಕಿಲ್ಲ, ಅದನ್ನೂ ನಾನೇ ಬೇಡಿ ತಂದುಕೊಂಡೆ. . . . "

'ಇದೆಲ್ಲ ನಿನ್ನ ಹಣೆಬರೆಹಾಂತ ಸುಮ್ಮನೆ ಈ ಪಡಿಪಾಟ ಪಡುತ್ತಿಯೇ. ಎಲ್ಲಾದರೂ ನೆಮ್ಮದಿಯಲ್ಲಿ ಇದ್ದಿಂಬೇಕು ಎಂದು ನಿನಗೆ ಅನಿಸುವುದಿಲ್ಲವೇ?'

"ದಿನವೂ ನಾನು ಆಸೆ ಪಡುತ್ತೇನೆ. ನಿಮ್ಮಂತವರ ಮನೆ ಬಾಗಿಲಲ್ಲಿ ಬಂದು ನಿಂತಾಗಲೆಲ್ಲ, ಮನೆಯ ತಾಯಂದಿರನ್ನು ಕಂಡು ಕರುಬುತ್ತೇನೆ. ಆದರೆ ನನ್ನ ಹಣೆ ಬರಹ ಬೇರೆಯೇ—" ಎಂದು ಅವಳು ಒಂದೆರಡು ಕಂಬನಿಗಳನ್ನು ಸುರಿಸಿದಳು. ಏನೋ, ತನ್ನ ಎಳಪೆಯಂದಿನ ನೆನಪಾಗಿರಬೇಕು. ಅವಳ ಮೊಗವೊಮ್ಮೆ ಮಿಂಚು ಹೊಳೆದು, ಕತ್ತಲಿಟ್ಟಿತು. ಅವಳು ಮುಂದು ವರಿದಳು. "ಮಲಬಾರಿನ ಹಳ್ಳಿ ನಾಲೆಯೊಂದರಲ್ಲಿ ನಾನು ಇಂಗ್ಲಿಷ್ ಒಂದನೆ ತರಗತಿಯಲ್ಲಿ ಮೂರು ತಿಂಗಳು ಓದಿದ್ದೇನೆ. ನನ್ನ ಹೆತ್ತವರೆಲ್ಲ ಕೊಲೆರಾ, ಡೀಸೆಂಟ್ರೀ ಎಂದು ಒಂದೊಂದೇ ಹೊಸ ಜಾಡಿಗೆ ತುತ್ತಾಗಿ ನನ್ನನ್ನು ತಬ್ಬಲಿಯಾಗಿ ಬಿಟ್ಟುಹೋದರು. ನಾನು ಬಿಕ್ಕೆ ಬೇಡುತ್ತ ಇತ್ತ ಬರಬೇಕಾಯಿತು. ಆಗಿಂದಲೇ ನನ್ನ ಕನಸೆಲ್ಲ ಬಂಜೆಯೆನಿಸಿತು. . . . . "

'ನಾನು ನಿನ್ನನ್ನು ಒಂದು ಮನೆಯಲ್ಲಿ ಚಾಕರಿಗೆ ನೇಮಿಸುತ್ತೇನೆ. ನೀನು ಬಿಕ್ಕೆ ಬೇಡುವುದನ್ನು ಬಿಟ್ಟುಬಿಡುತ್ತಿಯಾ? . . . . .'

"ಅವರನ್ನು ಕೇಳಬೇಕು—"

'ನಾನು ಹೇಳುವ ಮಾತು ನಿನ್ನ ಒಳಿತಿಗೇ ಇದೆ ಎಂದು ನಿನಗೆ ಮನವ

ರಿಕೆಯಾದರೆ ಸಾಲದೆ, ಅವನ ಮಾತೇನು?

"ಅವರು ಕೊಂದು ಬಿಟ್ಟಾರು!"

೨

ನಾನು ಹೆಚ್ಚಾಗಿ ಮಂಗಳೂರಿನಲ್ಲಿಯೇ ಇರುವುದು ವಾಡಿಕೆ. ಬಹಳ ದಿನಗಳಿಂದ ಊರು ಮನೆಗೆ ಬಂದಿರಲಿಲ್ಲ. ಕಳೆದ ದೀಪಾವಳಿಗೆ ಬರಲೇ ಬೇಕಾಗಿದ್ದಿತು. ನನ್ನೊಂದಿಗೆ ನನ್ನ ಇಬ್ಬರು ಗೆಳೆಯರು, ಗೋಪಿ ಮತ್ತು ಸದಾ ಅವರೂ ಬಂದಿದ್ದರು.

ಹಬ್ಬದ ಊಟವಾಗಿ ನಾವು ಮೂವರೂ ವರಾಂಡದಲ್ಲಿ ಇಸೀಚೆರ್ ಹಾಕಿ ಕುಳಿತಿದ್ದೆವು. ಆಗ ಅದೇ ಆ ತಿರುಪೆಯವಳು ತಿರುಗಿ ಕಾಣಿಸಿ ಕೊಂಡಳು. ಅವಳನ್ನು ಕಂಡೊಡನೆ ನನಗೆ ಈ ಬಾರಿ ಬಹಳ ಸೋಜಿಗವೆ ನಿಸಿತು, ಕೌತುಕವೂ ಹುಟ್ಟಿತು. ಇನ್ನೂ ಒಂದು ವರ್ಷ ದಾಟಿರಲಿಲ್ಲ ಅವಳನ್ನು ಅಂದು ನೋಡಿ. ಆಗಲೂ ಹತ್ತು ಹನ್ನೊಂದು ತಿಂಗಳಿನ ಕೂಸೊಂದು ಅವಳ ಜೋಳಿಗೆಯಲ್ಲಿದ್ದಿತು, ಈಗಲೂ ಒಂದು ಐದಾರು ತಿಂಗಳ ಕೂಸು ಅದರಲ್ಲಿ ಪವಡಿಸಿತ್ತು.

"ಒಂದೀಟು ಗಂಜಿ ನೀರು ಕೊಡಿ ತಾಯೀ--" ಎಂದು ಅವಳು ರಾಗ ಎಳೆದಳು. ಅದೇ ಕೊರಳು, ಅದೇ ದನಿ; ಹೆಚ್ಚು ಕಡಿಮೆಯಿರಲಿಲ್ಲ.

ಮನೆಯೊಳಗೆ ಎಲ್ಲರೂ ಊಟಕ್ಕೆ ಕುಳಿತಿದ್ದರು. ಅವರು ಈಕೆಗೆ ಅನ್ನ ನೀರು ನೀಡುವಂತಿರಲಿಲ್ಲ. ನಮಗೂ ಅಂಗಡಿಯ ಪಡಿ ಅಕ್ಕಿಯೇ ಬಂದು ಆಗಬೇಕು. ಆದುದರಿಂದ ನಾನು ಬೇಗನೆ ಕಿಸೆಗೆ ಕೈಹಾಕಿದೆ.

ನನ್ನ ಕೈಯಿಂದ ಕಾಸು ಹೊರಡುವುದೆಂಬ ನಂಬಿಕೆಯಾದ ಒಡನೆ, ಅವಳು, ನನ್ನ ಗೆಳೆಯರನ್ನು ಬೇಡಿದಳು: "ಧರ್ಮ ಮಾಡಬೇಕು ದೊಡ್ಡ ವರು........" ಎಂದು ಸುರು ಮಾಡಿದಳು. ಆಗಾಗ ನಮ್ಮ ಮನೆ ಬಾಗಿಲಿಗೆ ಬರುತ್ತ ಹೋಗುತ್ತ ಇರುವವಳು, ಅವಳಿಗೆ ಈ ನನ್ನ ಗೆಳೆಯರು ಮನೆಗೆ ಹೊಸಬರೆಂಬುದು ಗೊತ್ತಾಗದೆ ಇದ್ದೀತೇ! ಅವಳು ಅವರಿಂದಲೂ ಒಂದೊಂದು ಬಿಲ್ಲೆಯನ್ನು ಇಸುಕೊಂಡಳು.

ನಮ್ಮ ಗೆಳೆಯರಲ್ಲಿ ಗೋಪಿ ಕೇಳಿದ: "ಈ ಮಗು ಯಾರದು?" ಎಂದು ಸಹಜವಾಗಿ. ಅವಳು ಅದಕ್ಕೆ ಹೆಮ್ಮೆಯಿಂದಲೇ ಮಾರ್ನುಡಿದಳು: "ನನ್ನದು!"

"ನಿನಗೆ ಗಂಡ ಇದ್ದಾನೇನು?"

ಅವಳು ತಲೆ ಬಾಗಿ, ತೂಗಿದಳು.

ಗೋಪಿ ಒಡನೆ ಕೇಳಿದ: "ಇದನ್ನು ಸಾಕಲು ನಿನ್ನ ಗಂಡನಿಗೆ ಕೈಲಾಗುವುದಿಲ್ಲವಾದರೆ ಯಾಕೆ ಹುಟ್ಟಿಸಿದಾನೆ? ನಿನಗೂ ಏಕೆ ಈ ತ್ರಾಸ?........"

ಅವಳು ಮಾತನಾಡಲಿಲ್ಲ. ತಲೆಬಾಗಿ ನಿಂತಿದ್ದಳು. ಆಗ ನಾನು ಏನನ್ನೋ ಕೇಳುವುದರಲ್ಲಿದ್ದೆ. ಅನಿತರೊಳಗೆ, ಗೋಪಿ, ತಿರುಗಿ ಕೇಳಿದ: "ಸರಿಯೇ, ನಿನಗೆ ಈ ಬಟ್ಟೆಬರೆಗಳನ್ನೋ ಮೈ ಕೈಗಳನ್ನೋ ಚೆನ್ನಾಗಿ ತೊಳೆದುಕೊಳ್ಳುವುದಕ್ಕೂ ಆಗುವುದಿಲ್ಲವೇ? ಎಂತ ಹೇಸಿಗೆ........!"

"ನನಗೂ ಹೇಸಿಗೆಯಾಗುವುದು ಸ್ವಾಮಿ." ಅವಳು ಇಳಿದ ದನಿಯಲ್ಲಿ ಹೇಳಿದಳು: "ನಾನು ಒಂದು ದಿನವಾದರೂ ಮೀಯದೆ ಮಲಗಿದವಳಲ್ಲ. ಆದರೆ ಮನಾರ (ಸುಚಿ) ವಾಗಿದ್ದುಕೊಂಡು ಬಿಕ್ಕೆ ಎತ್ತಲು ಹೋಗಬಾರದೆಂದು ನಮ್ಮವರು ಕಟ್ಟುಮಾಡಿದಾರೆ. ಈ ನಿನ್ನ ಹಾಳು ವೇಸವನ್ನೇ ನೋಡಿ ಕಳಕಳಿಯಿಂದ ಯಾರಾದರೂ ನಾಲ್ಕು ಕಾಸು ಕೊಟ್ಟಾರು. ಎಂದು ಅವರು ಹೇಳುತಾರೆ. ಹಗಲು ಹೊತ್ತಿನಲ್ಲಿ ನನ್ನ ಬಟ್ಟೆಬರೆಗಳನ್ನು ಒಗೆಯುತ್ತ ಹೊತ್ತುಗಳೆದರೆ, ನನ್ನ ಹೊಟ್ಟೆಗೆ ಸಿಕ್ಕುವುದೂ ಕಡಿಮೆಯಾಗುವುದು........"

"ನಿನ್ನ ಬಳಿ ಬೇರೆ ಬಟ್ಟೆಗಳಿಲ್ಲವೆ........?"

"ನಿಮ್ಮಂತವರು ಯಾರಾದರೂ ಕೊಟ್ಟರೆ ಉಂಟು. ಅದನ್ನಾದರೂ ನಾನು ಮೊದಲಿಗೆ ಉಡಬಾರದು. ನಮ್ಮವರು ಅದನ್ನು ಉಟ್ಟು ಮಣ್ಣಿನ ಮಡಿಮಾಡಿ ಕೊಟ್ಟರೆ ಆಯಿತು ಬೆಳ್ಳಗಿನ ಬಟ್ಟೆ ಉಟ್ಟರೆ ಅವರು ಬಡಿದು ಹಾಕುತ್ತಾರೆ.... ..."

ನಾನು ಕೇಳಿದೆ—"ನಿನ್ನನ್ನು ಕಂಡಾಬಟ್ಟೆ ಬಡಿದು ಹಾಕುವುದಕ್ಕೂ, ಮಕ್ಕಳನ್ನು ಹುಟ್ಟಿಸುವುದಕ್ಕೂ ಮಾತ್ರವೇ ನಿನಗೊಬ್ಬ ಗಂಡನಿದ್ದಾನೆಂದು ತೋರುವುದು ಅಲ್ಲವೇ? ಕಳೆದ ದೀಪಾವಳಿಯ ಸುಮಾರಿಗೆ ನಿನ್ನನ್ನು ಇಲ್ಲಿಯೇ ಒಮ್ಮೆ ನಾನು ಮಾತನಾಡಿಸಿದ್ದು ನೆನವುಂಟೊ ನಿನಗೆ!........"

"ಉಂಟು."

"ಆಗ ನಿನ್ನ ಕೈಯಲ್ಲಿ ಸುಮಾರು ಇದೇ ವಯಸ್ಸಿನ ಒಂದು ಕೂಸು ನಿನ್ನ ಇದೇ ಜೋಳಿಗೆಯಲ್ಲಿ ಕಂಡ ನೆನವು ಅದೇನಾಯಿತು?

"ಅದನ್ನು ಅನಾಥ ಆಶ್ರಮಕ್ಕೆ ಸೇರಿಸಿದೆ."

"ಹೀಗೆ ಒಟ್ಟು ಎಷ್ಟು ಮಕ್ಕಳನ್ನು ದಾನ ಮಾಡಿರುವಿಯಮ್ಮ ನೀನು?" ಎಂದು ನಾನು ನಗುತ್ತಲೇ ಕೇಳಿದೆ. ಅವಳಿಗೂ ಒಂದು ಹಿಗ್ಗಿನ ನಗು ಹೊರ ಟಿತು. ಅದೇ ಕವಡಿಲ್ಲದ ಹಿಗ್ಗಿನಿಂದ ಅವಳು ಅಂದಳು: "ಒಟ್ಟು ಹನ್ನೆರಡು ಮಕ್ಕಳನ್ನು ಹಡೆದಿದೇನೆ, ಇದನ್ನೂ ಕೂಡಿ; ಎಂಟು ಮಕ್ಕಳನ್ನು ಅಲ್ಲಿಗೆ ಒಪ್ಪಿಸಿದೇನೆ. ಉಳಿದುವು ಬರುವಾಗಲೇ ಕಣ್ಣು ಮುಚ್ಚಿದುವು—"

"ವರುಷಕ್ಕೊಂದರ ಲೆಕ್ಕದಲ್ಲಿ ಕೊಡುತ್ತ ಬಂದಿರುವೆ, ಜೋಕೆಯಾಗಿ-" ಎಂದು ಸದಾ ನಗೆಯಾಡಿದ. ನಾವೆಲ್ಲರೂ ನಕ್ಕೆವು, ಅವಳಿಗೂ ನುಂಗಲಾರದ ನಗು ಬಂತು. ಸದಾ ಗೋಪಿಯೊಡನೆ ಅಂದನು: "ಈ ನಾಥರು ಮಕ್ಕಳನ್ನು ಅನಾಥ ಮಾಡುವುದೇ ಒಂದು ಕಸುಬೆಂದು ಮಾಡಿಕೊಂಡಿದಾರೋ ಏನೋ."

"ಅಲ್ಲವಾದರೆ ಓರ್ಫನ್ ಹೌಸಿಗೆ, ಮಕ್ಕಳು ಎಲ್ಲಿಂದ ಬರಬೇಕೋ?"

"ಈ ಬಳಗವನ್ನು ಬೆಳೆಸುವುದಕ್ಕಾಗಿಯೇ ಆಹೌಸು, ಈ ಹೋಮು ಎಂದು ನಮ್ಮವರು ತೆರಿಗೆಯೆತ್ತಿದ್ದ ದುಡ್ಡನ್ನು ವೆಚ್ಚಮಾಡುತ್ತಿದಾರೆ. ನೋಡು, ರಾಮು, ಅವಳನ್ನು ಎಲ್ಲಿಗಾದರೂ ಚಾಕರಿ ಮಾಡುತ್ತೀಯಾ ಎಂದು ಕೇಳು—"

"ಅದನ್ನು ನಾನು ಮೊದಲೇ ಕೇಳಿ ಆಗಿದೆ. ಅವಳ ಗಂಡ ಬಿಡ ಲೊಲ್ಲನಂತೆ."

"ಹಾಗಾದರೆ ಹೀಗೆ ಬಿಕ್ಕೆ ಎತ್ತುವುದನ್ನೇ ಒಂದು ಕಸಬು ಎಂದು ಗೊತ್ತು ಮಾಡಿದಿಯೇನು?—" ಗೋಪಿ ಕೇಳಿದ.

ದೊಡ್ಡವರ ಮನೆ ಬಾಗಿಲಲ್ಲಿ ಚಾಕರಿ ಮಾಡುವುದಕ್ಕಿಂತ ಬಿಕ್ಕೆ ಬೇಡು ವುದೇ ಒಳಿತೆಂದು ಅವರು ಹೇಳುತಾರೆ—"

"ನೀನು ಮೊದಲು ಎಲ್ಲಾದರೂ ಚಾಕರಿ ಮಾಡಿದ್ದುಂಟೇನು?"

"ಹೌದು ಒಂದು ಕಡೆ ನಿಂತಿದ್ದೆ. ಅಲ್ಲಿ ಮನೆಯಾಳುಗಳೆಲ್ಲ ನನ್ನನ್ನು ಕೆಡಿಸಲು ಬಂದರು. ಹಗಲಿಡೀ ದುಡಿದರೂ ಒಂದು ತುತ್ತನ್ನ ಹಸಿದಾಗ ಸಿಕ್ಕುವಂತಿಲ್ಲ. ಅವರು ಉಂಡು ಬಿಸುಟುದನ್ನು ತಿನ್ನಲು ನಾಯಿಯಂತೆ ಇರುಳು ಹನ್ನೆರಡು ತಾಸಿನವರೆಗೆ ಕಾದಿರಬೇಕು. ಮತ್ತೆ ಈ ಮಕ್ಕಳು ಮರಿಗಳಾದರೆ, ಅವನ್ನು ಕಟ್ಟಿಕೊಂಡು ಹೇಗೆ ಚಾಕರಿ ಮಾಡಬಲ್ಲೆ?........"

ಇದನ್ನು ಕೇಳಿ ಸದಾ ಅಂದನು: "ಯಾಕೆ ಸುಮ್ಮನೆ ಅವಳನ್ನು ನಿಲ್ಲಿಸಿ ಕೊಂಡಿದೀರಿ, ಹೋಗಲಿ."

ಅವಳು ಹೊರಡಬೇಕಾದರೆ ಅಂದಳು: "ನಿಮಗೆ ಪುಣ್ಯ ಬರುತ್ತದೆ—ಈ ಕೂಸಿಗೆ ಹೊದೆಸಲು ಒಂದು ಚೂರು ಬಟ್ಟೆ ಇಲ್ಲ, ಏನಾದರೂ ಕೊಡಿಸಿ ಸ್ವಾಮಿ—" ಈಗೇನು ಇಲ್ಲೆಂದರೂ ಕೇಳಲಿಲ್ಲ. ಹಟ ಹಿಡಿದು ನನ್ನೊಂದು ಹಳೆಯ ದೋತರವನ್ನು ಇಸುಕೊಂಡು ಹೋದಳು.

೩

ಬಿಸು ಹಬ್ಬಕ್ಕೆ ಬರಬೇಕೆಂದು ಸದಾ, ಗೋಪಿಯರಿಗೆ ಕರೆಕಳಿಸಿದ್ದೆ. ನನ್ನ ಓಲೆಗೆ ಇಬ್ಬರಿಂದಲೂ ಬರಲಾಗುವುದಿಲ್ಲೆಂದೇ ಮರುವಡಿ ಬಂದಿದ್ದುವು. ಆದರೆ ಗೋಪಿ ಬರೆದ ಕಾಗದದಲ್ಲಿ ಇಲ್ಲಿ ಹೇಳತಕ್ಕ ಕೆಲವು ಮಾತುಗಳಿದ್ದುವು; ಅವನು ಹೀಗೆ ಬರೆದಿದ್ದನು—

ಮದರಾಸು, ೨೦-೩-೪೬.

"ಗೆ|| ರಾಮೂಗೆ—

"ನಿನ್ನ ಕರೆಯೋಲೆಯನ್ನು ನೋಡಿ ನನಗೆ ಬಹಳ ಹಿಗ್ಗೆನಿಸಿತು. ಅದೇ ಹಿಗ್ಗಿನಿಂದ ರಜೆಗೆ ಬರೆದುಕೊಂಡೆ. ರಜೆ ಸಿಕ್ಕಲಿಲ್ಲ. ಅದರಿಂದ ಬರಲಿಕ್ಕಾಗುವುದಿಲ್ಲವೆಂದು ಬಹಳ ಬೇಸರದಿಂದ ಬರೆಯುತ್ತಿದೇನೆ. ನೀನು ಸಿಟ್ಟಾಗಬಾರದು.

"..............................

"ನಾವು ಅಂದು ದೀಪಾವಳಿಯ ದಿನ ಒಬ್ಬ ತಿರುಪೆಯುವಳನ್ನು ಕಂಡು ಮಾತನಾಡಿಸಿದ್ದೇವಲ್ಲ? ಅವಳು ಈಚೆಗೆ ಮದರಾಸಿನಲ್ಲಿ ಕಂಡುಬಂದಳು. ನನ್ನ ಗುರುತನ್ನು ಮರೆತಿಲ್ಲ. ಕಂಡೊಡನೆ ನಿಂತು ಮಾತನಾಡಿಸಿದಳು. ನನಗೂ ಅಚ್ಚರಿಯೆನಿಸಿತು. 'ನಿನ್ನ ಅವರು ಕೂಡಾ ಬಂದಿದಾರೋ?' ಎಂದು ನಾನು ಕೌತುಕದಿಂದ ಕೇಳಿದೆ ಅವಳು ಇಲ್ಲೆಂದು ಹೇಳುತ್ತ ತನ್ನೊಂದು ಕತೆಯನ್ನೇ ಹೇಳಿದಳು—

"ನಿಮ್ಮನ್ನು ಆ ದಿನ ಅವರ (ನಿನ್ನ) ಮನೆಯಲ್ಲಿ ಕಂಡು ಮನೆಗೆ ಹೋದಾಗ ಅಲ್ಲಿ ಒಂದು ಹೊಸ ಸಂಗತಿ ನಡೆದಿತ್ತು. ನಮ್ಮವರು ಯಾರೋ ತನ್ನೊಬ್ಬ ಸಂಗಡಿಗನನ್ನು ಕೂಡಿಕೊಂಡು ಬಂದು ನಡುಮನೆಯಲ್ಲಿ ಕುಳಿತು ಹೆಂಡ ಕುಡಿಯುತ್ತಿದ್ದರು. ಕುಡಿದು ಇಬ್ಬರಿಗೂ ಸೊಯ ತಪ್ಪಿತು. ನಮ್ಮವರು ನನ್ನನ್ನು 'ರಂಡೆ ಮುಂಡೆ' ಎಂದು ಬೈಯುತ್ತ ಹೊಡೆಯಲು ಬಂದರು.

ಅವರ ಆ ಸಂಗಡಿಗನು ಅವರನ್ನು ಸಂತೈಸುವ ನೆಪದಿಂದ ನನ್ನ ಮೈ ಮೇಲೆ ಕೈಯಾಡಿಸಲು ಹವಣಿಸಿದನು. ಇಬ್ಬರೂ ಒಟ್ಟಿಗೆ ನನ್ನನ್ನು ಮುತ್ತಿದರು. ನಾನು ಇವರ ಪೀಡೆಯಿಂದ ತಪ್ಪಿಸಿಕೊಳ್ಳಲು ತುಂಬ ಹೆಣಗಾಡಿ, ಬರಿಯು ಮಗುವಾದೆ. ಆ ಹೊಸಬನು ನನ್ನನ್ನು ತೋಳು ಅಪ್ಪಿಕೊಂಡುಬಿಟ್ಟು, 'ನೀನು ನನ್ನವಳು—' ಎಂದು ಮುದ್ದಾಡಲು ತೊಡಗಿದನು. ಇದನ್ನು ಕಂಡೊಡನೆ ನಮ್ಮವರು ರೇಗಿ ಹೋದರು. ಅವರು ಕೆರಳಿದ ಹದ್ದಿನಂತೆ ಅವನ ಮೇಲೆ ಹಾರಿಬಿದ್ದು, ಕತ್ತುಹಿಸುಕಿ ಅವನನ್ನು ಮುಗಿಸಿಬಿಟ್ಟರು........ ಇದಾಗಿ ಇನ್ನು ನನ್ನ ಮೇಲೂ ಬೀಳುವವರಿದ್ದರು. ನಾನು ತಟ್ಟನೆ ಕೋಣೆಯ ಹೊರಗೆ ನೆಗೆದು ಹೊರಗಿಂದ ಅದರ ಬಾಗಿಲನ್ನು ಎಳೆದುಕೊಂಡೆ. ಅವರು ಒಳಗಿಂದ ಗದ್ದರಿಸುತ್ತಿದ್ದರು ಏನೆಂದರೂ ನಾನು ಬಾಗಿಲು ತೆರೆಯಲಿಲ್ಲ. ಬಾಗಿಲನ್ನು ಗುದ್ದಿ ಮೆಟ್ಟಿ ಕೈಕಾಲುಗಳು ಸೋತುಹೋದುವು. ಕೊನೆಗೆ, "ರಂಡೇ, ಇಗೋ ಈ ಕೂಸನ್ನೂ ಕತ್ತರಿಸಿ ಬಿಡುತ್ತೇನೆ, ಬಾಗಿಲು ತೆರೆಯು ತ್ತೀಯೋ ಇಲ್ಲವೋ?" ಎಂದು ಚೊಬ್ಬಿಟ್ಟರು. ನನಗೆ ಆಗ ಏನೂ ಮಾಡು ವುದಕ್ಕೂ ಗೊತ್ತಾಗಲಿಲ್ಲ. ನನ್ನ ಕೈಕಾಲುಗಳು ನಡುಗುತ್ತಿದ್ದುವು ಇವರು ಮಾಡಿದ ಕೊಲೆಯಿಂದಾಗಿ ಇನ್ನೇನೆಲ್ಲ ಆಗುವುದೋ ಎಂಬ ಎಣಿಕೆ ಬಂದೊಡನೆ ಆ ಇರುಳಲ್ಲಿ ನನಗೆ ಕಂಡ ದಾರಿ ಹಿಡಿದು ಅಲ್ಲಿಂದ ಓಡಿದೆ. ಯಾವುದೋ ಒಂದು ರೇಲವೇ ನಿಲುದಾಣ ಸಿಕ್ಕಿತು. ಅಲ್ಲಿಂದ ಇಲ್ಲಿಯುವರೆಗೆ ಬಂದೆ—"

"ನಿನ್ನ ಅವರ ಕತೆಯೇನಾಯಿತು?"

"ಗೊತ್ತಿಲ್ಲ. ನನ್ನ ಆ ಕೂಸನ್ನು ಅವರು ಕೊಂದರೆಂದು ಮಾತ್ರ ನಾನು ಬೇರೆಯುವರಿಂದ ಕೇಳಿ ತಿಳಿದುಕೊಂಡೆ—"

"ಬೇರೆಯುವರು ಯಾರು?"

"ತಿರುಪೆ ಎತ್ತಿಕೊಂಡು ಅಲ್ಲಿಂದ ಬಹಳ ಮುಂದಿ ಬಂದಿದ್ದಾರೆ, ಅವರು-"

"ಸರಿ. ಎಲ್ಲ ನಿನ್ನ ಬಳಗದವರೇ!" ಎಂದು ನಾನು ನಕ್ಕೆನು. ಅವಳು ಮಾತ್ರ ತೆಪ್ಪಗಿದ್ದಳು. ನಾನು ಕೇಳಿದೆ, "ಇನ್ನೇನು ಮಾಡುವೆ? ಹೀಗೇ ಬಿಕ್ಕೆ ಎತ್ತುತ್ತಾ ದಿನ ಕಳೆಯುವೆ ಎನ್ನುವೆಯೊ?"

"ಇನ್ನೇನು ದಾರಿಯುಂಟು, ಸಾಮಿ—?"

"ನೆಮ್ಮದಿಯಲ್ಲಿ ಇರುವಂತೆ ನಿನಗೆ ಬೇರೆ ಏರ್ಪಾಡು ಮಾಡಿದರೆ ನೀನು ಒಪ್ಪುತ್ತೀಯಾ? ಇನ್ನು ನಿನ್ನ ಅವರನ್ನು ಕೇಳಬೇಕಾದದ್ದು ಇಲ್ಲವಲ್ಲಾ?"

"ಅವಳು ಯಾವ ಏರ್ಪಾಡಿಗೂ ತಯಾರಿದ್ದಳು. ಒಟ್ಟಿನಲ್ಲಿ ಅಂದಿನ ಕೊಲೆಯ ಮೊಕದ್ದಮೆಯಿಂದ ಪಾರಾಗಬೇಕು. ಅದಕ್ಕಾಗಿ ಅವಳು ಒಪ್ಪಿದ ಳೆಂದು ತೋರುತ್ತದೆ. ಅಂತೂ ಅವಳನ್ನು ನಾನು ಇಲ್ಲಿನ ಬೆಗ್ಗರ್‌ಹೋಮಿಗೆ ಸೇರಿಸಿದೆ.

"ಒಂದೆರಡು ತಿಂಗಳೊಳಗೆ ಅವಳ ಮೈಗೆ ಅಂಟಿಕೊಂಡಿದ್ದ ಜಾಡು ಸುಮಾರಾಗಿ ಎಲ್ಲ ಮಾಸಿತ್ತು. ಮೊಗದಲ್ಲಿ ಹೊಸ ಕಳೆ ತುಂಬಿತ್ತು. ಆಕೆ ಹೊಸ ಗೆಲುವಿಂದ ನಲಿದಾಡುವುದನ್ನು ಕಂಡವರು ಯಾರೂ ಇವಳು ಹನ್ನೆರಡು ಮಕ್ಕಳನ್ನು ಹಡೆದ ತಾಯಿ ಎಂದು ಹೇಳುವಂತಿಲ್ಲ. ಈಗ ಬಹಳ ಚೆನ್ನಾಗಿದಾಳೆ........

"ಆ ಕೊಲೆಯ ಮೊಕದ್ದಮೆ ನಿಮ್ಮಲ್ಲಿ ನಡೆಯುತ್ತದಂತೆ; ಏನಾಯಿತೆಂದು ತಿಳಿಸು.

ಇಂತು,

ನಿನ್ನ ಗೋಪಿ."

ಬಿಸುವಿಗೆ ನಾನು ಊರಿಗೆ ಬಂದವನು ಈ ತಿರುಪೆಯವಳ ಕುರಿತು ಅವರಿವರನ್ನು ಕೇಳಿದೆ. ಅವರು ಹೇಳಿದ ಮಾತುಗಳಿಂದ ಹೊರಟ ಸಂಗತಿಗಳಿವು —

ತನ್ನ ಸಂಗಡಿಗನನ್ನು ಕೊಲೆಮಾಡಿದ ಮೇಲೆ ಆ ತಿರುಪೆಯವಳ ಗಂಡ ತನ್ನ ಕೂಸನ್ನೂ ಕೊಂದು ಹಾಕಿದನು. ಅಂದಿನ ಇರುಳು ಕಳೆದು ಬೆಳಕು ಹರಿಯುವುದರೊಳಗೆ ಎರಡೂ ಹೆಣಗಳನ್ನು ಒಯ್ದು ಒಂದು ಗುಡ್ಡೆಯ ಪಕ್ಕದಲ್ಲಿರಿಸಿ ತಾನು ತಲೆಮರೆಸಿಕೊಂಡನು. ಪೋಲೀಸರಿಂದ ಅವನ ಪತ್ತೆಯಾಗಲಿಲ್ಲ. ಯಾರ ಮೇಲೆಯೋ ಅನುಮಾನದಿಂದ ಕೇಸು ನಡೆಯಿತು; ಮತ್ತೆ, ಸಾಕೆನಿಸುವ ರುಜುವಾತು ಇಲ್ಲದೆ ಹೋದುದರಿಂದ ಅದು ಬಿಟ್ಟುಹೋಯಿತು.

ನಾನು ಇದನ್ನು ಗೆಳೆಯ ಗೋಪಿಗೆ ತಿಳಿಸಿದೆ. ಅವನು ಇನ್ನೊಂದು ಕಾಗದದಲ್ಲಿ ಈ ಕೆಳಗಿನ ಮಾತುಗಳನ್ನು ಬರೆದಿದ್ದ:

"ತಿರುಪೆಯವಳು ಇಲ್ಲಿಂದಲೂ ಓಡಿಹೋದಳು ಯಾರೋ ಛಬ್ಬ ಗಂಡಸು ತಾಗಿದಾನೆಂದು ಇಲ್ಲಿನ ಸೂಪರಿಂಟೆಂಡೆಂಟರು ಹೇಳುತ್ತಾರೆ. ಬಯಕೆ ಯಾರನ್ನೂ ಬೆನ್ನು ಬಿಟ್ಟಿಲ್ಲ. ಈ ಬಾಳ್ವೆ ಬರಿದೆಂದು ಸಾರಿ ದೂರಿದವರನ್ನೂ ಅಂದು ಅಂಟಿಕೊಂಡೇ ಇದ್ದೀತು ಚರಿತೆಯನ್ನು ಮಾಡಿದ ರಾಜ ರಾಣಿ

ಯರಿಂದ ಬಿಕ್ಕೆ ಬೇಡುವ ಚೋಮು ಕೊರಗನ ವರೆಗೆ ಬಯಕೆ ಯಾವಾಗಲೂ ಬಾಳಿನ ನಂಟಾಗಿ, ಅಸು ಉಸಿರಾಗಿ ಇದ್ದದ್ದೇ. ಇದಕ್ಕೆ ಎದುರು ಮಾತ ನಾಡುವವರು ಇದ್ದಾರು; ಆದರೆ ದೆವ್ವ ದೇವರುಗಳನ್ನೂ ಇದು ಬಿಟ್ಟಿಲ್ಲ ಎಂದ ಮೇಲೆ ಆ ಬಡ ತಿರುಪೆಯುವಳ ಪಾಡೇನು? ಹನ್ನೆರಡು ಹಡೆದಳು, ನಮ್ಮ ಬೀದಿಗಳನ್ನು ಚಂದಗಾಣಿಸಲು ಬೇಕಾದರೆ ಇನ್ನೂ ಒಂದು ಹನ್ನೆರಡು ಮಕ್ಕ ಳನ್ನು ಹಡೆದು ನೀಡಿಯಾಳು. ಮನುಷ್ಯನೆಂಬ ಪ್ರಾಣಿಯ ರೂಪದಲ್ಲಿ ಎಂತೆಂತಹ (ರೂಪ) ವಿಕಾರಗಳು ಉಂಟೆಂಬ ಬಣ್ಣನೆಗೆ ನೆರವಾದಾಳು........"

೪

ಕಳೆದ ತಿಂಗಳಲ್ಲಿ, ಹೆಚ್ಚಿನ ಕೆಲಸವೊಂದರ ಮೇಲೆ, ನಾನು ಬೆಂಗಳೂರಿಗೆ ಹೋಗಿದ್ದೆ. ದಾರಿಯಲ್ಲಿ ಒಂದು ದಿನ ಮೈಸೂರಿನಲ್ಲಿ ಇಳಿದುಕೊಂಡಿದ್ದೆ. ನನ್ನ ಗೆಳೆಯರೊಬ್ಬರು ತಮ್ಮಲ್ಲಿ ಊಟಕ್ಕೆ ಕರೆದಿದ್ದರು. ಅವರ ಮನೆಯಲ್ಲಿ ಹೂ ಹಾಕುವ ಹಬ್ಬ ನಡೆಸಿದ್ದರು. ಊಟ ಮುಗಿಸಿ ನಾನೂ ನನ್ನ ಗೆಳೆ ಯರೂ ಮೈಸೂರಿನ ಅಂದವನ್ನು ನೋಡಿಕೊಂಡು ಬರೋಣವೆಂದು ಹೊರ ಟೆವು. ಆಗ ಅವರ ಮನೆಯ ಎದುರು ಗೇಟಿನ ಬಳಿಯಲ್ಲಿ ಅದೇ ಆ ತಿರುಪೆ ಯುವಳು ಕೈಯಲ್ಲೊಂದು ಕೂಸನ್ನು ಹಿಡಿದುಕೊಂಡು ನಿಂತಿದ್ದುದನ್ನು ನೋಡಿದೆ. ಅವಳೂ ನನ್ನನ್ನು ಗುರುತಿಸಿದಳು. ನನಗೆ ಅವಳೊಡನೆ ಏನನ್ನು ಮಾತನಾಡಲೆಂದೂ ಹೊಳೆಯಲಿಲ್ಲ. ಅವಳೇ ಮಾತನಾಡಿಸಿದಳು; "ನಿಮ ಮನೆಯಲ್ಲಿ ನೋಡಿದ ಅವರನ್ನು ನಾನು ಮದರಾಸಿನಲ್ಲಿ ನೋಡಿದೆ. ತುಂಬ ಉಪಕಾರ ಮಾಡಿದರು—"

ನನಗೆ ಗೋಪಿಯ ಕಾಗದದ ನೆನಪಾಯಿತು. ಅವನು ಬಣ್ಣಿಸಿದಂತೆ ಈಗ ಇವಳು 'ಚೆನ್ನಾಗಿ' ಇರಲಿಲ್ಲ. ಬಹಳ ದಿನ ಊಟವಿಲ್ಲದೆ ಹಸಿದು ಬಸವಳಿದವಳಂತೆ ಇದ್ದಳು. ನಾನು ಕೇಳಿದೆ—

"ಇಲ್ಲಿಗೆ ಯಾವಾಗ ಬಂದೆ?"

"ಮೂರು ದಿನಗಳಾದುವು. ಇಲ್ಲಿ ಎಲ್ಲೂ ಒಂದು ಗುಟುಕು ನೀರು ವರೆಯುಲಿಲ್ಲ ಕೂಡ—"

"ನೀರು ಎರೆಯಬೇಕೇ? ಏನು? ಮದ್ರಾಸಿನಲ್ಲಿ ಹೊಟ್ಟೆ ತುಂಬ ಉಂಡು ತಿಂದು ಇರುವದನ್ನು ಬಿಟ್ಟು ನೀನು ಯಾಕೆ ಓಡಿಕೋಡು ಬಂದೆ?"

"ಅಲ್ಲಿ ಕಟ್ಟಿಹಾಕಿದಂತೆ ಆಗುತ್ತಿತ್ತು. ಹಗಲೆಲ್ಲಾ ಕೈಕಾಲು ಮಡಚಿ ಒಂದು ಕಡೆ ಕುಳಿತು ಏನಾದರೂ ರಗಳೆಯ ಕತೆಯನ್ನು ಕೇಳಿಕೊಂಡು ಸುಮ್ಮನೆ ಹೊತ್ತು ನೂಕುವುದು ನನಗೆ ಸರಿ ಬೀಳಲಿಲ್ಲ. ಆ ತರದ ಬಾಳಿಗೆ ನನ್ನ ಬಾಳು ಹೊಂದಿಕೊಳ್ಳುವಂತಿಲ್ಲವೆಂದು ಕಂಡಿತು. ಜೊತೆಗೆ ಆ ಕೈಗಾರಿಕೆಗಳೂ—"

"ಇದು ನಿಜವಾದ ಕಾರಣಗಳಲ್ಲ. ನಿನ್ನ ಅವರು ನಿಜವಾಗಿ ಬಂದಿದ್ದ ನಲ್ಲವೇ?"

ಗೋಪಿ ಬರೆದ ಮಾತು ನಿಜವೇ ಅವಳು ತಲೆ ಬಾಗಿ ಅಂದಳು—"ಅವರು ಬಂದು ನನ್ನನ್ನು ಅಲ್ಲಿಂದ ತಪ್ಪಿಸಿದರು. ನಾನು ಅವರನ್ನು ಕಂಡೊಡನೆ ಏನು ಮಾಡುವುದಕ್ಕೂ ಅರಿಯದವಳಾದೆ."

"ಈಗೇನು ಮಾಡುವೆ?"

"ಅವರು ಅಂದಂತೆ ತಿರುಗಿ ಅದೇ ದಾರಿ—"

ನನ್ನ ಮನ ಆಕೆಯ ಪುಕ್ಕತನಕ್ಕೆ, "ಅವರನ್ನು" ನಂಬಿದ ನೆಚ್ಚಿಗೆಗೆ ಕಳಕಳಿ ತಾಳಿತು. ಅವಳ ಕೈಯಲ್ಲಿ ಒಂದಾಣೆ ಇರಿಸಿ ನಾನು ಗೆಳೆಯರೊಂದಿಗೆ ಮುಂದೆ ಸಾಗಿದೆ. ತಲೆಯಲ್ಲಿ ಸುಳಿಯುತ್ತಿದ್ದ ಹೊಳಹಿನ ರಾಸಿ ಈ ಕತೆಗೆ ಒಟ್ಟಿನಲ್ಲಿ ಒಂದು ತೂಕದ ಮಾತನ್ನು ಕಾಣಿಸಿತು: ಕಾಡಿನ ಹಕ್ಕಿ ಕಾಡಿಗೆ, ಗೂಡಿನ ಹಕ್ಕಿ ಗೂಡಿಗೆ, ಬೇಡುವ ಮಕ್ಕಳು ಬೇಡಿಯೇ ಮುಗಿದಾರು.

---

# ಇಬ್ಬರು ಚಿತ್ರಗಾರರು

ಜೀವನ ಕಲಾವಿದ. ಅವನು ಬರೆದ ಚಿತ್ರಗಳನ್ನು ನಾಡು ಮೆಚ್ಚಿತ್ತು. ಆನಂದ ಇನ್ನೊಬ್ಬ ಕಲಾವಿದ. ಜೀವನನನ್ನು ಕಂಡರೆ ಅವನಿಗೆ ಆಗುತ್ತಿರಲಿಲ್ಲ. ತನಗಿಂತಲೂ ಆತನದೇನು ಹೆಚ್ಚು ಎಂದು ಈತನು ಜೀವನನನ್ನು ಹಂಗಿಸುತ್ತಿದ್ದನು.

ಆನಂದ ರೂಪದ ಆರಾಧಕ. ಸೃಷ್ಟಿಯ ಯಾವ ರೂಪವನ್ನಾದರೂ ಅಚ್ಚೊತ್ತಿದಂತೆ, ಬಣ್ಣಗಳ ತೂಕದಲ್ಲಿ ಮೋಹಕವಾದ ಮೇಳಗೊಟ್ಟು ಅಂದವಾಗಿ ಚಿತ್ರಗಳನ್ನು ಬಿಡಿಸುತ್ತಿದ್ದನು. ಜೀವನನಂತೆ ಈತನು ಬರೆದ ಚಿತ್ರಗಳಲ್ಲೂ ಒಂದೊಂದು ರೇಖೆಯಲ್ಲಿಯೂ ಒಂದು ವೈಯ್ಯಾರವುಂಟು.

ಇಬ್ಬರದೂ ಪಳಗಿದ ಕೈಯೇ. ಆದರೆ ನೋಟ ಬೇರೆ ಬೇರೆ.

ಜೀವನ ತಾನು ಗುರುತಿಸಿದ ವಸ್ತುವಿನ ಒಳಗನ್ನು ಇಣಿಕಿ ಅದರ ಹಸುಹುಸುರನ್ನು ಬಣ್ಣಗಳಲ್ಲಿ ಬರೆಗಳಲ್ಲಿ ಬಿಡಿಸುತ್ತಿದ್ದನು. ಅವನು ರೂಪಕ್ಕೆ ಎಂದೂ ಬೆಲೆ ಕೊಟ್ಟಿರಲಿಲ್ಲ. ಕೆಲವು ಚಿತ್ರಗಳಲ್ಲಿ ರೂಪವನ್ನು ಭಂಗಿಸಿ ಭಾವವನ್ನು ಚಿತ್ರಿಸಿದುದುಂಟು. ಅವನೆಣಿಕೆಯಲ್ಲಿ ರೂಪ ಅನುಭಾವದ ರೇಖೆಗಳನ್ನು ಗುರುತಿಸಲು ನೆರವಾದರೆ ಸಾಕು; ಅದಕ್ಕಿಂತಲೂ ಹೆಚ್ಚಿನದು ರೂಪದಿಂದ ಬರತಕ್ಕುದಲ್ಲ.

ಆನಂದ ಇದನ್ನು ಒಪ್ಪುವುದಿಲ್ಲ. ಯಾರಾದರೊಬ್ಬನು ಅಂದವಾಗಿದ್ದರೆ ಸಾಕು; ಗುಣವಿರಬೇಕು, ಚಾರಿತ್ರ್ಯವಿರಬೇಕು ಎಂಬ ಆಶಯವಿಲ್ಲ.

ನಾಡು ಜೀವನನ ಚಿತ್ರಗಳನ್ನು ಮೆಚ್ಚಿವೆ, ತನ್ನವೂ ಮನ್ನಣೆ ಪಡೆದಿವೆ—ಆದರೆ ಆತನು ಬರೆಯುವ ರೂಪವಿಲ್ಲದ ಮೋಡಿಯನ್ನು ಜನ ಏಕೆ ಮೆಚ್ಚುವದು ಎಂಬುದನ್ನು ಅರಿಯದೆ, "ಜೀವನ ಬರೆವುದು ಕೇವಲ ಅಭ್ಯಾಸ ಚಿತ್ರಗಳು; ವಸ್ತುವನ್ನು ಇದ್ದಕ್ಕಿದ್ದಂತೆ ಚಿತ್ರಿಸಲು ಇನ್ನೂ ಅರಿತಿಲ್ಲ ಅವನ ಚಿತ್ರಗಳು ಏನು ಸೊಗಸೋ; ಅವುಗಳಲ್ಲಿ ಏತರ ಕೈವಾಡವೋ! ಬರೆದರೆ ಯಾವೊಂದು ವಸ್ತುವಿನ ಪ್ರತಿಯೊಂದು ಅಂಗಾಂಗಳ ಪ್ರತಿವರ್ಣನೆಯಿರಬೇಕು. ಅದಿಲ್ಲದೆ ಇದ್ದರೆ ಅದನ್ನು ಕಲೆಯ ಕೃತಿ ಎನ್ನುವ ಜನಕ್ಕೆ ಕಲೆಯ ವಿಚಾರವೇ ಅರಿಯದು . . ." ಎಂದು ಮುಂತಾಗಿ ಆನಂದ ತನ್ನ ಎದುರಾಳಿಯ ಕುರಿತು ಅಪಪ್ರಚಾರ ಮಾಡುತ್ತ ಹಗೆ ಹೋರಿದನು.

ಜೀವನ ಹಗೆಯರಿಯದ ಸ್ನೇಹಿಗ. ಸರಲಸೌಜನ್ಯದೊಂದಿಗೆ ಜೀವನ ಸಾಫಲ್ಯಕ್ಕೆ ಎರವಾದ ಬಡತನವೂ ಹುಟ್ಟಿಸಿಂದಲೇ ಅವನೊಂದಿಗೆ ನಡೆದು ಬಂದಿತ್ತು. ಆನಂದ ದೊಡ್ಡ ಸಿರಿವಂತರ ಮನೆಯಲ್ಲಿ ಹುಟ್ಟಿದವನು; ಸುಖ ಭೋಗಗಳಲ್ಲಿ ಬೆಳೆದವನು. ಜೀವನ ಚಿತ್ರಗಳನ್ನು ಬರೆದು ಮಾರಿ ಬಂದುದ ರಿಂದ ಬದುಕಬೇಕು; ಅವನಿಗೆ ಅದರಿಂದ ಕಲೆ ಜೀವದ ಸೊತ್ತು. ಆನಂದ ಅದನ್ನು ಒಂದು ವಿನೋದವೆಂದು ಕಟ್ಟಿಕೊಂಡಿದ್ದನು. ಆದರೂ ಜೀವನ ನೊಂದಿಗೆ ಹಗೆ ಹೋರುವುದು ತನ್ನ ಕರ್ತವ್ಯ; ಕಲೆಯ ಮರ್ಯಾದೆ ಇಲ್ಲವೆ ಕಳೆದು ಹೋಗಬಹುದು, ಕೆಟ್ಟು ಹೋಗಬಹುದು ಎಂದು ಆನಂದ ತಿಳಿದು ಕೊಂಡನು.

ಜೀವನನಲ್ಲಿ ತನಗಿದ್ದ ಹಗೆಯನ್ನು ಸಾಧಿಸುವ ಯೋಚನೆಯಾಯಿತು. ಇತ್ತ ಆತನನ್ನು ಹಂಗಿಸುತ್ತಲೇ ಇದ್ದನು. ಅತ್ತ ತಾನೊಂದು ಅತ್ಯುತ್ತಮ ಚಿತ್ರವನ್ನು ಬರೆದು ತನ್ನ ನಾಡಿನ ಜನರನ್ನು ಮಂಕುಗೊಳಿಸಬೇಕೆಂದು ಹಂಚಿಕೆ ಹಾಕಿದನು.

ಜೀವನದಲ್ಲಿ ಹುರುಡು ಇರಬೇಕು; ಆಸೆ ಇರಬೇಕು; ಇಲ್ಲವೆ ಪ್ರಗತಿ ಯಿಲ್ಲ; ಆದರೆ ಹೆಚ್ಚಿನ ಜನ ಈ ಹುರುಡು ಈ ಆಸೆಗಳನ್ನು ತಪ್ಪು ದಾರಿಯಲ್ಲಿ ಒಯ್ದು ಹಾಳಾಗುತ್ತಾರೆ. ಆನಂದನೂ ಹಾಗೇ ಮಾಡಿದನು.

ಯಾರಿಗಾದರೂ ತನ್ನ ಮೇಲೆ ಇದ್ದ ನಂಬುಗೆ ಇನ್ನೊಬ್ಬನಲ್ಲಿ ಇರುವು ದಿಲ್ಲ. ತನ್ನ ಹಾಗೇ ಇತರರಿಗೂ ದೇವರು ಬಗೆ, ಬೆಳಕು, ನೋಟಗಳನ್ನು ಇತ್ತಿದ್ದಾನೆ ಎಂಬುದನ್ನು ಮರೆಯುತ್ತಾನೆ. ಆನಂದ ಹೀಗೇ ತನ್ನ ಎದುರಾ ಳಿಯನ್ನು ಕಡೆಮಾಡಿ ಎಣಿಸಿದನು. "ಜೀವನ ಬಡವ, ಅವನಿಗೆ ಕರುಳಿನ ತಲಗೊತ್ತೇ ಹೊರತು ಜೀವನ ಸೌಂದರ್ಯದ ನೆಲೆಯೇನು ತಿಳಿದೀತು!" ಎಂದು ಅವನು ಸಹಜವಾಗಿ ಲೆಕ್ಕಿಸಿದನು.

ಆನಂದ "ಸೌಂದರ್ಯಸುಧಾ" ಎಂಬ ಚಿತ್ರವನ್ನು ಬರೆಯಲು ಕೈಹಚ್ಚಿ ದನು. "ಇದನ್ನು ಅವನಿಗೆ ತೋರಿಸಬೇಕು" ಎಂದು ಕನಸು ಕಂಡನು. "ಚಾರು ಸೌಂದರ್ಯದಿಂದ ಎಸೆಯುವ ಮುದ್ದಿನ ಗಿಣಿಯೊಬ್ಬಳನ್ನು ನಗ್ನ ರೂಪ ದಲ್ಲಿ ಚಿತ್ರಿಸಬೇಕು . . . ."

ಆನಂದನ ಮೋರೆಯಲ್ಲಿ ಗೆಲುಪಿನ ನಗೆಯೊಂದು ಮೂಡಿತು.

"ಹ್ಹ! ಹ್ಹ!! ಹ್ಹ!!! . . . . . ಜೀವನನಂಥ ಬಡ ಜಂತು ಹೇಗೆ ಬರೆಯು

ಬಲ್ಲ? ಮನುಷ್ಯರೂಪವನ್ನು ಬರೆಯ ಹೊರಟು ಮಂಗನ ಮೋರೆ ಬರೆವವನಿಗೆ ರೂಪಸೌಂದರ್ಯದ ಗುಟ್ಟೇನು ಗೊತ್ತು. ಸೌಂದರ್ಯದ ಉಪಾಸನೆಯಲ್ಲಿ ಬಡ ಜನರು ದೇಗುಲದ ಹೊರಗೆ ನಿಲ್ಲುವ ಹೊಲೆಯರಂತೆ. . . ." ಮನ ಹಾಳು ಹಂಚಿಕೆಯ ಹಣಿಗೆಯಲ್ಲಿ ಹಾಯ್ದರೆ ಸಿಕ್ಕು ಸಿಕ್ಕು ಅದನ್ನು ಅದರಿಂದ ಬೇಗನೆ ಬಿಡಿಸಲಾಗುವುದಿಲ್ಲ. ಆನಂದನ ಬುದ್ಧಿ ಅಂಕೆ ಬಿಟ್ಟುಹೋಯಿತು. ಮುದ್ದು ಮುದ್ದಾದ ಚೆಲುವೆಯೊಬ್ಬಳು, ಮನದ ರಾಣಿಯಾಗಿ ಇರತಕ್ಕವಳು, ತನ್ನ ಅರ್ಧಾಂಗಿಯಾಗಿ ಮನೆಯಲ್ಲೆ ಇದ್ದರೂ, ಇಚ್ಛೆಗೆ ಅನುವರ್ತಿಯಾಗಿ, ಮನ ವರಿತು ಮೆಚ್ಚಿಸುವ ವಾರಕನ್ಯೆ, ಭೈರವಿಯ ಮನೆಯ ಬಾಗಿಲಂತೂ ಆತನನ್ನು ಸ್ವಾಗತಿಸಿತು ಅಲ್ಲಿನ ಸುಖ-ಸೌಂದರ್ಯ ತನ್ನ ಮನೆಯಲ್ಲಿ ಸಿಕ್ಕುತ್ತೆಯೇ? ಬೆಲೆವೆಣ್ಣಿನಿಂದ ಲಭಿಸುವ ಸುಖಭೋಗಗಳು ಸಂಸಾರದ ಒಗತನದಲ್ಲಿ ಸಿಕ್ಕ ಲಾರದು ನಿಜ. ಅದು ನಿಷ್ಠುರ ಸತ್ಯ; ಆನಂದನಿಗೆ ಬೇಕಾದುದೂ ಅದೇ. ಹೊಲೆಯಾದ ಮನವು ಹೊಲಕನ್ನೇ ಮೇಯುವುದು.

ಭೈರವಿ ಹೆಸರಾದ ಸೂಳೆ, ಸುಂದರಿ! ಆನಂದ ಆಕೆಯ ಮನೆಯಲ್ಲಿ ಒಕ್ಕಲು ಮಾಡಿದನು. ಭೈರವಿ ಆತನ ರತಿಯಾದುದನ್ನು ಅರಿತು, ಆತನ ಮಡದಿ ಅವನನ್ನು ಕರೆಸಿ ಜಗಳಾಡಿದಳು. ಜೀವನನ ಮೂಗು ಮುರಿವ ಆತನ ಚಲದ ಮುಂದೆ ಈಕೆಯ ಅಳಲು, ಗೋಳು ಕೆಲಸಮಾಡಲಿಲ್ಲ. ಆಕೆ ಸೋತಳು.

ಭೈರವಿ ರಂಭೆಯಂತೆ ಕುಣಿಕುಣಿದು ಮಣಿದಾಗ ಮುದ್ದಾಡಿ ಆಕೆಯ ಒಂದೊಂದೂ ಅಂಗಾಂಗದ ಮೋಹನ ರಸವನ್ನು ಸವಿದು ಮತ್ತಾದ ರಸಿಕ ಆನಂದನಿಗೆ ತನ್ನ ನೆತ್ತರು ನಾಡಿಗಳಲ್ಲೆಲ್ಲ ಮೂಲೋಕವೇ ಕಂಡಂತೆ ಅನುಭವವಾಗಿರಬೇಕು. ಭೈರವಿಯನ್ನು ಕೊಂಡಾಡಿದನು. ಬತ್ತಲೆ ನಿಲ್ಲಿಸಿ ಕೈಯಲ್ಲಿ ಒಂದು ಹೂಬುಟ್ಟಿಯನ್ನು ಕೊಟ್ಟನು; ದಿನವಿಡೀ ಶಿಲಾವಿಗ್ರಹದಂತೆ ನಿಲ್ಲಿಸಿ ಕೊಂಡು 'ಸೌಂದರ್ಯಸುಧಾ' ಚಿತ್ರವನ್ನು ಬರೆಯತೊಡಗಿದನು. ಹೀಗೆ ಹಲವೂ ದಿನ ನಿರಂತರ ಶ್ರಮಪಟ್ಟು 'ಸೌಂದರ್ಯಸುಧೆ'ಯನ್ನು ಕೆನ್ವಾಸಿನ ಮೇಲೆ ಇಳಿಸಿಯೇ ಬಿಟ್ಟನು.

ಸ್ವತಃ ಭೈರವಿಗೇ ಈ ಚಿತ್ರವನ್ನು ನೋಡಿದಾಗ ಹುಟ್ಟಿದ ಜಿಗುಪ್ಸೆಯಲ್ಲಿ, ತನ್ನ ರೂಪದ ಚೆಲುವನ್ನು ಕಂಡು ಒಂದಿನಿತು ಹಿಗ್ಗೂ ಆಗಿರಬೇಕು. 'ಇದನ್ನು ಎಲ್ಲಿಗೆ ಒಯ್ಯುವಿರಿ? ಇಲ್ಲೆ ಇರಿಸಿದ್ದರೆ ಚೆನ್ನಾಗುತ್ತಿತ್ತು . . . . .!' ಎಂದು ಆಕೆ

ವೈಯ್ಯಾರದಲ್ಲಿ ಹೇಳಿದಳು. ಆನಂದ ನಗುತ್ತ ಅಂದನು: 'ನಿನ್ನ ಸೌಂದರ್ಯದ ಪೂಜೆ ಎಲ್ಲರೂ ಮಾಡಬೇಕು. ಜೀವನ ನಾಚಿಕೆಯಿಂದ ತಲೆ ಬಾಗಬೇಕು. ಈ ಸುಂದರ ಕೃತಿಯನ್ನು 'ಸೌಂದರ್ಯಸುಧಾ' ಎಂದು ಕರೆದಿದ್ದೇನೆ.' ಆತನ ರಮಿಸುವ ಮಾತನ್ನು ಕೇಳಿ ಆಕೆ ಮೂಕಳಾದಳು.

ಜನರು ಮುಗ್ಧರಾದರು. 'ಸೌಂದರ್ಯ ಸುಧಾ' ಅತ್ಯಂತ ಪರಿಣಾಮಕಾರಿ ಯೆನಿಸಿತು. ಜನ ಮುಗ್ಧತೆಯಿಂದಲೋ ಅದನ್ನು ಆರಾಧಿಸಿದರು. ಕೆಲವು ಸಂಭಾವಿತ ಹಿರಿಯರಂತೂ ಅದರ ಅಚ್ಚಾದ ಬ್ರೊಮ್ಯಾಡ್ ಪ್ರತಿಯನ್ನು ಹೆಚ್ಚೆಚ್ಚು ಬೆಲೆಕೊಟ್ಟು ತಂದು, ಮನೆಯೊಳಗಿನ ತರುಣ ಜನಾಂಗ ಎಲ್ಲಾ ದರೂ ಕಂಡಾರು ಎಂಬ ಶಂಕೆಯಿಂದ, ದೇವರ ಕೋಣೆಯಲ್ಲಿಯೇ ಕತ್ತಲೆಯ ಮೂಲೆಗೆ ಅಡಗಿಸಿದ್ದು ದಿನವೂ ಪ್ರಾಣಾಯಾಮ ಮಾಡತೊಡಗಿದರು. ತರುಣ ಬ್ರಹ್ಮಚಾರಿಗಳಿಗಂತೂ ಈ ಚಿತ್ರದಿಂದ ಉಂಟಾದ ಕುದಿವು ಜಲಸ್ತಂಭನ ಮಾಡಿದರೂ ನಿವೃತ್ತಿಯಾಗಲಿಲ್ಲವಂತೆ. ಕಲಾವಿಮರ್ಶಕರು ಏಕಕಂಠದಿಂದ 'ಸೌಂದರ್ಯ ಸುಧಾ ಸೂರ್ಯ ಚಂದ್ರರು ಇರುವನಕ ಬಾಳೀತು!' ಎಂಬ ಅಭಿ ಪ್ರಾಯಪಟ್ಟ ಮೇಲೆ ನಾವೇನು ಹೇಳಬೇಕು? ಸೌಂದರ್ಯ ಸುಧೆ ಒಂದು ಉಜ್ವಲ ಕ್ರಾಂತಿಯನ್ನೇ ಎಬ್ಬಿಸಿತು.

ಪ್ರಾಯಶಃ ಜೀವನನ ಯಶಸ್ಸಿಗೆ ಇಂತಹ ಕ್ರಾಂತಿಗಳು ಕಾರಣವಾಗಿರ ಲಾರವು. ಇಂತಹ ಚಿತ್ರಗಳನ್ನು ಜೀವನ ಬರೆಯಲಾರ. ಇಂತಹ ರೂಪ ಲಾವಣ್ಯವನ್ನು ಕಂಡರಿಯಲಾರ. ಆ ರೂಪದ ವೈಯ್ಯಾರವೇ, ಚೆಲುವೇ ಏನಿದ್ದರೂ ಅವನು ಅದನ್ನು ಲೆಕ್ಕಿಸನು. ಆನಂದನ ಈ ಹೊಸ ಕೈವಾಡವನ್ನು ನೋಡಿ ಅವನಿಗೆ ಬಹಳ ದುಃಖವಾಯಿತು. 'ನಮ್ಮ ತಲೆಯೇನು, ನಮ್ಮ ಸಂಸ್ಕೃತಿಯೇನು? ನಮ್ಮ ಜೀವನದ ಸಾಫಲ್ಯವೆಂದು, ಹೇಗೆ........' ಎಂದು ಮುಂತಾಗಿ ಅವನ ನೊಂದ ಎದೆ ಗುಡುಗಲಾರಂಭಿಸಿತು.

ವಿಮರ್ಶೆ ಉದಾತ್ತತೆಯನ್ನು ಕಳೆದುಕೊಂಡಾಗ, ಸಾಹಿತ್ಯ ಕಲೆಗಳು ರಾಗಲೋಭಗಳಿಗೆ ತುತ್ತಾಗುತ್ತವೆ. ಜೀವನ ಸಂಸ್ಕೃತಜೀವಿ. ಅವನ ಮನಸ್ಸು ರಾಗದ್ವೇಷಗಳಿಗೆ ಅಡಿಮೆಯಾಗದಂತಹ ಅನುಭವ ಆದರ್ಶಗಳಿಂದ ರೂಪುಗೊಂಡುದು. ಅವನ ಜೀವನವಂತೂ ಸಾಮಾನ್ಯವಾಗಿ ಒಂದು ಉದಾರ ಚರಿತೆ ಎಂದು ಹೇಳಬೇಕು. ಅದರಿಂದಲೇ ಅವನ ವಿವೇಕ ಉದಾತ್ತತೆಯ ಕಡೆಗೆ ಒಲಿಯಿತು.

'ಕಲೆಯು ಉದ್ದೀಪನವಾಗಬೇಕು, ಜನತೆಯ ಅಜ್ಞಾನದ ಅಂಧಕಾರವನ್ನು ಕಳೆಯಬೇಕು—' ಎಂದು ಜೀವನ ಇರುಳು ಹಗಲು ಚಿಂತಿಸತೊಡಗಿದನು.

ಆನಂದನ ಚಿತ್ರಗಳು ಜನರ ಮನರಂಜನೆಯನ್ನು ಮಾಡುತ್ತಿರುವಾಗ ಜೀವನನ ಚಿತ್ರಗಳಿಗೆ ಬೆಲೆಯಿಲ್ಲವಾಯಿತು. ಸಣ್ಣ ಕತೆಗಳು, ನಾವೆಲುಗಳಲ್ಲಿ ಬರುತ್ತಿರುವ ಪ್ರಣಯ ಕತೆಗಳನ್ನು ಓದಿ ತಣಿವ ನಮಗೆ ಗೀತೆಯ ನೆನಪಾದರೂ ಆಗುವುದೇ? ಜೀವನ ಹುಟ್ಟು ಬಡವ, ಇನ್ನೂ ಬಡವನಾದ ಒಡಲೂ ಬಡಕಲಾಗುತ್ತ ಬರುತ್ತಿತ್ತು.

ಆದರೆ ಜೀವನ ಇದರಿಂದ ಕುಗ್ಗಲಿಲ್ಲ. ಇಂದಿನ ನಾಗರಿಕತೆಯೇ ಹೀಗೇ ಬತ್ತಲೆ ನರ್ತಿಸುತ್ತಿರುವಾಗ, ಅದೇ 'ಸೌಂದರ್ಯಸುಧೆ' ಜನತೆಯ ಮನದಲ್ಲೂ ನರ್ತಿಸಬೇಕಾದದ್ದೇ. ಈ ಪಡಿಪಾಟಿವನ್ನು ಜೀವನ ಒಬ್ಬನಿಂದ ಹೋಗಾಡಿಸಲು ಆದೀತೇ. ರಾಗಲೋಭಗಳಿಗೆ ಎರವಾದ ಜನತೆಯನ್ನು ಸುಲಭವಾಗಿ ತಿದ್ದಿ, ಸರಿದಾರಿಗೆ ತರಲು ಬಹಳ ಕಷ್ಟ. ಆದರ್ಶ ತತ್ವಗಳು ಪುಸ್ತಕದ ಬದನೆಯ ಕಾಯಿಯಾಗಿರುವಾಗ, ಆದರ್ಶಜೀವಿಯಾಗಲು ದಾರ್ಶನಿಕ ದೃಷ್ಟಿಯನ್ನು ತೆರೆಯಿಸಲು ಪ್ರಯತ್ನಪಡುವ ಜೀವನನ ಕಲೆ ಯಾರಿಗೆ ಒಪ್ಪೀತು? ಆದರೆ ಜೀವನನ ಭಾವಾನುಭಾವಗಳು ಚೇತನಗೊಂಡಾಗಲೆಲ್ಲ ಅದ್ಭುತ ಕಲಾಕೃತಿಗಳ ಸೃಷ್ಟಿಯಾಗುತ್ತಿತ್ತು; ಅವನು ರೂಪದ ಸೌಂದರ್ಯವನ್ನು ಕೆಲಕ್ಕೆ ಒಗೆದು, ಜೀವ-ಭಾವಗಳ ಸೌಂದರ್ಯ ಸತ್ಯವನ್ನು ತನ್ನ ಕೃತಿಗಳಲ್ಲಿ ವರ್ಣಿಸುತ್ತಿದ್ದನು. ಇವು ಅವನ ಚಿತ್ರಶಾಲೆಯಲ್ಲಿಯೇ ಉಳಿದುವು.

ಒಂದು ದಿನ ಸಂಜೆ, ತಂಗಾಳಿ ಮಂದ ಮಂದವಾಗಿ ತೀಡುತ್ತಿತ್ತು. ನೇಸರಿನ ಹೊಂಗಿರಣಗಳು ಅಡ್ಡನೆ ಹಾದು ಮೈಮುಟ್ಟಿದಾಗ ಜೀವನನಿಗೆ ಅತುಲಾನಂದವೇ ಆಯಿತು. ಅವನು ಎದ್ದು ನದೀಕಿನಾರೆಗೆ ಹೋದನು. ಅಲ್ಲಿ ಒಂದು ಬಂಡೆಯ ಮೇಲೆ ವಿಶ್ರಮಿಸಿಕೊಂಡು ತನ್ನ ಬಾಳುವೆಗೆ ಬೆಳಕೇನೆಂದು ಯೋಚಿಸತೊಡಗಿದನು. ಅವನ ಮನವೊಮ್ಮೆ ಬಾನಕ್ಕಿಯಂತೆ ಆಗಸದ ಏರಿಗೂ ಹಾರಿತು; ಒಮ್ಮೆ ಎದೆ ಭಾರವಾಗಿ ತಾನು ಕುಳಿತಲ್ಲಿಂದ ಕುಸಿದು ಹೋಗುವೆನೋ ಎಂಬ ಭ್ರಾಂತಿಯುಂಟಾಯಿತು. ಅವನ ಮನ ಉಯ್ಯಾಲೆಯಂತೆತೂಗತೊಡಗಿತು.

ಸಂಧ್ಯಾರಾಗದ ನೆರಳು ನದಿಯ ನೀರ ಮೇಲೆ ಬಿತ್ತು. ಸಂಜೆಗೆ ತಣಿದ

ಗಾಳಿಗೆ ಎದ್ದ ತುಪ್ಪಳು ಅಲೆಗಳು ಅದನ್ನು ಹರಿದು ಚೆಲ್ಲಿದುವು. ಜೀವನನ ಮನಸ್ಸಿನಲ್ಲಿ ಈ ಚೆಲ್ಲದ ಚೆಲುವಿನ ಬಗೆ ಏನೋ ಒಂದು ಹೊಸ ಸತ್ಯವನ್ನು ಹೊಳೆಯಿಸಿತು. ಅವನು ಎದ್ದನು; ಮನೆಯ ಕಡೆಗೆ ಹೊರಟನು; ಆತನ ಎದೆಯ ಒಳದನಿ ಅನಿಸಿತು; 'ನನ್ನ ಜೀವವು ನಿನಗೆ ಸೇರದಂತಹ ಮನೆಯೇ........'

ಜೀವನ ನೆನಪು ಮಾಡಿದನು: 'ಬರಿದಾಗಿ ಬಾಯ್ಬಿಡುವ ಹೂವಟ್ಟಲನ್ನು ಒಂದೆ ಹಿಮವನಿ ತುಂಬುವುದು, ರಂಜಿಸುವದು ಅದಕ್ಕೆ ಜೀವನವಾಗುವುದು.... ಹೊನಲುಕ್ಕಿ ಹರಿವ ನದಿಯೇನು?....ತಿಳಿಯಾದ ತಿಳಿವಿಗೆ ನಯವೊಂದೆ ಮೆರುಗು; ನಯ ಹಿರಿಯ ಗುಣದ ರೀತಿ....ಪ್ರೇಮ ಸತ್ಯದ ಸೌಂದರ್ಯದಲ್ಲಿ ಮಿನುಗುವ ಜ್ಯೋತಿ; ರಾಗ ಲೋಭಗಳು ಅದನ್ನು ಮರೆಸುವ ದುಶ್ಶಕ್ತಿಗಳು. ನಯ ನಲ್ಮೆಯ ನವುರು ಮೊಗವೂವಿನಲ್ಲಿ ಕಂಪಿಡುಗುವುದಿದೆ; ಆದರೆ ಅದು ಸದಾ ಯೋಗಿಯೊಬ್ಬನ ಪಾದತಲದಲ್ಲಿ ತೋರುವುದು.'

ಸಣ್ಣ ಗುಡಿಸಲು. ಜೀವನ ಅದನ್ನು ಹೊಕ್ಕನು. ಚಿಮಿಣಿಯನ್ನು ಉರಿಸಿ ಸಣ್ಣ ಮೇಜೊಂದರ ಮೇಲೆ ಇರಿಸಿದನು. ಅವನ ಮನಸು ಹಿಡಿತದಲ್ಲಿ ಇರಲಿಲ್ಲ. ಒಮ್ಮೆ ಕೋಣೆ ತುಂಬ ಶತಪಥ ಹಾಕಿದನು; ಮತ್ತೊಮ್ಮೆ ಕಿಟಿಕಿಯ ಎದುರು ನಿಂತು ಹೊರಗಿನ ಸೃಷ್ಟಿಯನ್ನು ನೋಡುತ್ತ ತಲ್ಲೀನನಾದನು. ತಿರುಗಿ ಬಂದು ಗೋಡೆಗಳಲ್ಲಿ ತೂಗಹಾಕಿದ್ದ ತನ್ನ ಕೆಲವು ಮೆಚ್ಚಿನ ಚಿತ್ರಗಳನ್ನು ನೋಡಿ ನಕ್ಕನು. ಎಲ್ಲೂ ಅವನ ಮನಸ್ಸನ್ನು ಹಿಡಿನಿಲ್ಲಿಸುವ ತೋರಿಕೆ ಇರಲಿಲ್ಲ. ಕೊನೆಗೆ ಮೇಜಿನ ಮೇಲೆ ಇದ್ದ ಒಂದು ಹೊತ್ತಗೆಯನ್ನು ಎತ್ತಿಕೊಂಡು ಇಳಿದನಿಯಲ್ಲಿ ಓದತೊಡಗಿದನು.

"....ತಳಿತ ತುಂಬೆ ಅರಳಿದ ಹೂ ಅನ್ನುತ್ತಿದೆ—"

"ದೇವಾ! ನಿನ್ನ ಭಾವನೆಯಲ್ಲಿ ನಾನು ಹೂವಾದೆ. ನಿನ್ನ ಚೆಲುವಿನಲ್ಲಿ ನಾನು ಅರಳಿದೆ. ನಿನ್ನ ನಲ್ಮೆಯಲ್ಲಿ ನಾನು ನಲಿದೆ. ನಿನ್ನ ಒಲುಮೆಗೆ ಎನ್ನೆದೆಯ ಕಂಪನ್ನು ಎರೆದೆ. ಆದರೆ, ನಾನು ಹಾತರಗಿತ್ತಿಯೇ? ಹಾಗೆ ಕರೆವರು ಎನ್ನ........!"

"ಗಾಳಿ ನಗೆಯಾಡಿತು, ತುಂಬಿ ಝೇಂಕರಿಸಿತು, ದೇವನೆಂದನು ನಗುತ್ತ." "ನಿನ್ನ ಜೀವನ ಪಾವನವಾಯಿತು. ನಿನ್ನೆದೆಯಲ್ಲಿ ಅಮೃತವಿದೆ. ನೀನು ನಿನ್ನ ಕರ್ಮವನ್ನು ಮಾಡುವೆ. ನಿನ್ನ ಯೋಗದಲ್ಲಿ ನನ್ನ ಕನಸು

ತಣ್ಣಾಯಿತು. ನನ್ನ ಆನಂದಕ್ಕೆ ಪಾರವೇ ಇಲ್ಲ... ....ನೀನು ಪರಿಪೂರ್ಣಳಾಗು........!"

"ಗಾಳಿ ತುಂಬೆಯ ಸೆಳವಿನ ಕಂಪನ್ನು ಎತ್ತಿಕೊಂಡು ಹೊಯ್ದಾಡಿತು ತುಂಬಿ ಹಾರಿ ಬಂತು. ತುಂಬೆ ಹೂ ಹೇಳಿತು: "ಜಾರ! ತುಂಬಿ!....ನನಗೆ ಮೆಚ್ಚುವ ಹಾಡು ಹಾಡುವೆ. ನನ್ನ ಕಟ್ಟಳೆಯಲ್ಲಿ ನೀನು ಸೊಗಸನ್ನು ಬಯಸುವೆ....ನಿನ್ನ ಹಾಡಿನಲ್ಲಿ ನನ್ನ ಚರಮವಿದೆ ಎಂಬುದನ್ನು ನೀ ಅರಿಯೆಯಾ! ನೀ ಕಾಲನ ಕವಿಯಾಗಿರುವೆ....ಆದರೆ, ನೀ ಬರಬೇಡ ಅನಲಾರೆ; ಹೇಗೆ ಅನಬಲ್ಲೆ? ದೇವರು ಆ ಮಾತನ್ನು ಕಲಿಸಿಲ್ಲ!...."

"ತುಂಬಿದ ಸವಿ ಜೇನನ್ನು ಸವಿದು ನಯವಾಗಿ ನುಡಿದಿತ್ತು ತುಂಬಿ: "ತುಂಬೇ! ನಿನ್ನ ಬಾಳು ತುಂಬ! ನಿನ್ನ ಹುಟ್ಟಿನ ಗುರಿಯನ್ನು ನಾ ಮುಚ್ಚಿಸುತ್ತೇನೆ....ನನ್ನ ದೇವರ ಭಾವನೆಯಲ್ಲಿ ನಾನು ತುಂಬಿ, ಅದರ ಚೆಲುವಿನಲ್ಲಿ ನಾ ಪತಂಗ, ಅವನ ಹಿಗ್ಗಿನಲ್ಲಿ ಈ ತುಷಾರ! ಇದೆಲ್ಲ ನಿನ್ನ ಬಾಳು ತುಂಬೆ. ನಮ್ಮಿಬ್ಬರ ಹಾಡೂ ಒಂದೇ!...."

"ಗಾಳಿ ಸಿರ್ರನೆ ಸುಳಿಯಿತು. ಮತ್ತೆ ವನವೆಲ್ಲ ನಕ್ಕಹಾಗಾಯಿತು. ಹೂವಿನ ಮಡಿಲಲ್ಲೆ ಮಲಗಿ ತುಂಬಿ ಹಾಡಿತು, ತುಂಬೆಯೂ ತಲೆತೂಗಿತು...."

ಜೀವನ ಹೊತ್ತಗೆಯನ್ನು ಕೆಳಗಿರಿಸಿದನು. "ಎಂಥ ಮಾಯೆ!" ಎಂದು ಜೀವನ ನಿಟ್ಟುಸಿರುಗರೆದನು. ಅವನು ತರ್ಕಿಸಿದನು: "ಭಗವಂತನ ಈ ಲೀಲಾಮಯ ಸೃಷ್ಟಿಯ ಸೌಂದರ್ಯಗರ್ಭದಲ್ಲಿ ಭಾವ, ಚೇತನ ಶಕ್ತಿಗಳು ಅಡಗಿರಬಹುದಲ್ಲದೆ, ರೂಪದ ಮುದ್ದೆಯಲ್ಲ. ಈ ಪ್ರಕೃತಿಯಲ್ಲಿ ಅಳುವ, ನಗುವ, ನಲಿವ, ಹಾರುವ, ಓಡುವ, ನಿಂತು ಮಾತಾಡುವ ಒಂದೊಂದೂ ವಸ್ತು ಆ ಭಾವದ, ಚೇತನದ ಸ್ವರೂಪಗಳಲ್ಲದೆ ಮತ್ತೇನು? ಅಧ್ಯಾತ್ಮ ಶಕ್ತಿಯ ಸ್ವರೂಪ ಜ್ಞಾನವನ್ನು ಅರುಹುದೇ ಕಲೆಯ ಕಾರ್ಯವಲ್ಲದೆ ಇನ್ನೇನಿದ್ದೀತು? . . ."

ಮಾರನೆಯ ದಿನ. ಜೀವನ ಬೆಳಗಾತ ಎದ್ದಿದ್ದನು. ಹೊಸ ಚಿತ್ರಗಳನ್ನು ಬರೆಯುವ ಹುರುಪಿರಲಿಲ್ಲ. ಕೆಲವು ದಿನಗಳಿಗೆ ಹಿಂದೆ ತಾನು ಬರೆದು ಮುಗಿಸಿದ್ದ ಶ್ರೀಮನ್ನಾರಾಯಣನ ವರ್ಣಚಿತ್ರದ ಕಡೆಗೇ ಜಡವಾಗಿ ನೋಡುತ್ತ ಕುಳಿತಿದ್ದನು. ಒಡನೆ ದರಿದ್ರನಾರಾಯಣನ ಕರೆಕೇಳಿಸಿತು: "ಧರ್ಮ ದೇವರೇ, ದೊಡ್ಡವರೇ! ಧರ್ಮಕೊಡಿ!" ಜೀವನ ಕಿಟಿಕಿಯಿಂದ ಹಣಕಿ ನೋಡಿದನು. ಹೊರಬಾಗಲಲ್ಲಿ ಅವನೊಂದು ಜೀವನದ ರುದ್ರಸೌಂದರ್ಯವನ್ನು ಕಂಡನು.

ಬಡವೆಯೊಬ್ಬಳು ಕೈಗೂಸೊಂದನ್ನು ಪಕ್ಕಕ್ಕೆ ಸೇರಿಸಿಕೊಂಡು ನಿಂತಿದ್ದಳು. ಎಳೆಯ ವಯಸ್ಸು, ಎಂದರೆ ಸುಮಾರು ಇಪ್ಪತ್ತೆಂಟು ತಾಗಿರಬಹುದು. ಆಕೆಯ ಮೈಯನ್ನು, ಮೈಯ್ಯ ನಾಚಿಗೆಯನ್ನು ಮುಚ್ಚಲು ಹರಕು ಚಿಂದಿಗಳಲ್ಲದೆ ಇನ್ನೇನೂ ಇರಲಿಲ್ಲ—ಬಡವಾದ, ಎಲುಬಿನ ಹಂದರವದು, ಹೊರಗಿನ ಕಣ್ಣಿಗೆ ಕಾಣುತ್ತಿತ್ತು. ಒಂದೇ ಒಂದು ತುತ್ತು ಅನ್ನದ ಹರಳಿಗಾಗಿ ಆಕೆ ಬಾಯ್ಬಿಟ್ಟು ಕೈಚಾಚಿ ನಿಂತಿದ್ದಳು. ದೈನ್ಯಭಾವವೇ ರೂಪಾಗಿ ನಿಂದಿಹುದೋ ಎನ್ನುವಂತೆ ಆಕೆ ನಿಂತ ನಿಲುವು, ಆಕೆಯ ಪಾಡು ಕರುಣಾಜನಕವಾಗಿತ್ತು. ಕೂಸೇನು, ಹಸಿದು ಹಸಿದು ಬಾಯಾರಿ ಬಳಲಿ ನಿದ್ದೆಹೋಗಿರಬೇಕು. ಇಲ್ಲವಾದರೆ ಈಕೆಯ ಒಟ್ಟಿಗೆ ಅದೂ ತನ್ನ ಹೊಟ್ಟೆಯ ಸಂಕಟವನ್ನು ಅತ್ತು ಹೇಳುತ್ತಿತ್ತು.

ಬಡವೆ ಅಂದಳು: "ಯಜಮಾನ, ಒಂದು ಚೂರು ಏನಾದರೂ ಕೊಡಿರಪ್ಪ! ಹಸಿವಾಗ್ತದೆ! . . . . ." ಆಕೆಯ ಬಾಯಾರಿತ್ತು. ಮಾತು ಗಂಟಲೊಳಗೇ ಹಿಂಗುತ್ತಿತ್ತು. ಜೀವನ ಅದನ್ನು ಕಂಡನು. ಒಡನೆ ಮುಂಬಾಗಿಲನ್ನು ತೆರೆದು ಆಕೆಯನ್ನು ಗುಡಿಸಲ ಹೊರಜಗಲಿಯಲ್ಲಿ ಕುಳ್ಳಿರಮ್ಮ! ಬರುತ್ತೇನೆ ಎಂದು ಒಳಗೆ ಹೋದನು.

ಜೀವನ ಮನಸಿನ ಕರಕರೆಯಿಂದಾಗಿ ಮುನ್ನ ದಿನದರಾತ್ರಿ ಉಂಡಿರಲಿಲ್ಲ. ಬೆಳಗಾತ ಈ ಬಡವೆ ಬಂದಳು. ತನಗೆ ಅಂದಿನ ಮಟ್ಟಿಗೆ ಬಾಕಿ ಉಳಿದಿದ್ದ ತಂಗೂಳು ಇದ್ದಿತು. ಬೇರೆ ಅವನ ಮನೆಯೊಳಗೆ ತಿಂಡಿತಿನಸುಗಳೇನೂ ಇದ್ದಿಲ್ಲ. ಅವನು ಒಂದು ಲೋಟಿದಲ್ಲಿ ನೀರನ್ನೂ ಈ ಕೂಳನ್ನೂ ತಂದು ಬಡವೆಯ ಎದುರು ಇರಿಸಿದನು. ಆ ಬಡವೆ ಕಣ್ಣುತುಂಬ ಸಂತಸದ ಕಂಬನಿ ತೋರಿದಳು. ಅವನೆಂದ "ಅದನ್ನು ಇಲ್ಲೇ ಉಂಡು ಹೋಗು. ಆಚೆಗೆ ಒಯ್ಯಬೇಡ . . . ."

ಆಕೆ ಒಂದು ಬದಿಗೆ ಸರಿದು ಕುಳಿತು ಹಸಿದ ಹೊಟ್ಟೆಗೆ ಬಕಬಕನೆ ಆ ತಂಗುಳನ್ನವನ್ನು ಮುಕ್ಕಿದಳು, ಒಂದು ಲೋಟೆ ನೀರನ್ನೂ ಕುಡಿದಳು. ಜೀವನ ಆಕೆ ಉಣ್ಣುತ್ತಿರುವಾಗ ಆಕೆಯನ್ನೇ ನೋಡುತ್ತ ನಿಂತಿದ್ದನು. ಆಕೆ ಏಕೋ ಈ ನೋಟವನ್ನು ಇದಿರಿಸಲಾರದೆ, ಅಂಜಿದಳು. ಬೆಚ್ಚಿದ ಚಿಗರಿಯಂತೆ ಓಡಿದಳು. ಆಗ ಅವಳು: "ಬ-ಹ-ಳ ಉ-ಪ-ಕಾ-ರ-ವಾಯ್ತು . . . ಬ-ರು-ತ್ತೆ-ೕ-ನೆ!" ಎಂದ ಮಾತುಗಳು ಜೀವನನ ಕಿವಿಗೆ ಬಿದ್ದಿರಲಾರದು.

ಇವಳೇಕೆ ಹೀಗೆ ಓಡಿದಳು ಎಂದು ಅವನು ಅಚ್ಚರಿಗೊಂಡನು.

ನಿಜ, ಅವಳು ಓಡಿದಳು; ಏಕೆ ಓಡಿದಳೆಂದು ಜೀವನ ಅರಿಯಲಾರ. ಜೀವನ ಆಕೆಯನ್ನು ಕಣ್ಣಿಟ್ಟು ನೋಡಿದರೆ ಆಕೆ ಅಂಜುತ್ತಾಳೆ. ಆ ಅಂಜಿಕೆ ಅವಳಿಗೇ ಗೊತ್ತು. ಅವಳನ್ನು ಕಣ್ಣಿಟ್ಟು ನೋಡುವವರು ಹಲವರಿದ್ದಾರೆ. ಯಾರೋ ಒಬ್ಬನ ಕಣ್ಣೋಟಕ್ಕೆ ಮರುಳಾಗಿ ಬಂದ ಕೇಡನ್ನು ಅವಳಿಂದು ಎರಡೂ ಕೈಗಳಿಂದ ಉಣ್ಣುತಿದ್ದಾಳೆ. ಹಾಗೇನೋ ಇದ್ದಿರಬಹುದು. ಸಾಮಾನ್ಯವಾಗಿ ಕೆಟ್ಟ ಮೇಲೆಯೇ ಬುದ್ಧಿ ಬರುವುದು ಎನ್ನುತ್ತಾರೆ. ಹಾಗೆ ಅವಳು ಎಚ್ಚತ್ತಿರಬಹುದು.

ಜೀವನನ ಕಣ್ಮನಗಳಲ್ಲಿ ಆ ಬಡವೆಯ ರುದ್ರ ರೂಪವೇ ತಾಂಡವವಾಡುತ್ತಿತ್ತು. ಕೆಲವು ದಿನಗಳ ಮೇಲೆ ಅವನು ಆಕೆಯ ಅಂದಿನ ನಿಲುವನ್ನು ಬಣ್ಣಿಸಿ ಒಂದು ಚಿತ್ರ ಬರೆವುದೆಂದು ಗೊತ್ತು ಮಾಡಿದನು.

ಹಚ್ಚಿದ ದೀಪ ಉರಿಯುತಿತ್ತು. ಜೀವನ ಬಣ್ಣಗಳನ್ನು ಕಲಸಿದನು. ಸ್ಥಿತಪ್ರಜ್ಞೆಯಿಲ್ಲದವನಂತೆ ಅವನು ಮೂಕನಾಗಿ ಕುಳಿತು ಚಿತ್ರ ಬರೆಯತೊಡಗಿದನು. ಎಂದೂ ಇಲ್ಲದ ಕೈನಡುಕ ಅಂದು ತಲೆತೋರಿತ್ತು; ಕುಂಚಗಳು ಓಡಾಡುತ್ತಿದ್ದುವು. ಮುಂದಿನ ಮುಂಜಾವದೊಳಗಾಗಿ ಆ ಬಡವೆಯ ತರುಣ ಚಿತ್ರದ ಪ್ರತಿಕೃತಿದಾರ್ಶಕ ಮುದ್ರೆಯೊಂದನ್ನು ತಾಳಿ ನಿಂತಿತು.

ಈ ಕೃತಿಗೆ ಯಾವ ಹೆಸರಿಡಲಿ ಎಂದು ಯೋಚಿಸಿದನು. ಅವನಿಗೆ ಬೇರೇನೂ ಹೊಳೆಯಲಿಲ್ಲ; 'ಧರ್ಮಾತ್ಮರೇ, ಧರ್ಮ ಕೊಡಿ!' ಎಂದು ಚಿತ್ರದ ಕೆಳಗಡೆ ದಪ್ಪ ಅಕ್ಷರಗಳಲ್ಲಿ ಬರೆದನು.

ಕೆಲವು ದಿನಗಳು ದಾಟಿದುವು, ಊರ ದೇಗುಲದಲ್ಲಿ ವರುಷ ವರುಷವೂ ನಡೆಯುವ ಜಾತ್ರೆ-ವ ಹಬ್ಬ ಬಂತು. ಆನಂದ ಈ ಹೊತ್ತನ್ನು ಸುಮ್ಮನೆ ಹೋಗಲು ಬಿಡಲಾರ. ಅವನು ಒಂದು ಚಿತ್ರಪ್ರದರ್ಶನವನ್ನು ಏರ್ಪಡಿಸುವ ಹಂಚಿಕೆ ನಡೆಸಿದನು. ಪತ್ರಿಕೆಗಳಲ್ಲಿ ಜಾಹೀರಾತುಗಳು ಹೊರಟುವು. ಊರು ನೆರೆಯೂರುಗಳಿಂದ ಬೇರೆ ಬೇರೆ ಕಲಾವಿದರ ಕೃತಿಗಳು ಬಂದು ಕೂಡಿದುವು. ಇದರ ಜೊತೆಗೆ 'ಒಳ್ಳೆಯ ಕೃತಿಗೆ ಬಹುಮಾನ ವಿತರಣೆ ಮಾಡುವ' ಏರ್ಪಾಡು ಆಯಿತು. ಆನಂದ ದುಡ್ಡಿದ್ದವನಾದುದರಿಂದ ಅವನು ವಂತಿಗೆ ಬೇಡಿದಾಗ ಊರ ಸಿರಿವಂತರೆಲ್ಲ ತಮ್ಮ 'ಉದಾರ ಹಸ್ತ'ವನ್ನು ನೀಡಿದರು. ಸಣ್ಣ ಊರಾದರೂ ಸುಮಾರು ಐನೂರು-ಆರುನೂರು ರೂಪ್ಯಾಗಳು ಕೂಡಿದುವು. ಒಂದು

ಸಮಿತಿಯೂ ಏರ್ಪಟ್ಟಿತು. ಸಮಿತಿಯವರು, ಆನಂದನಿಂದಲೇ ಆರಿಸಲ್ಪಟ್ಟಿರುವರು; ಆದುದರಿಂದ ಅವನಿಗೆ ಬಹುಮಾನ ಕೊಡತಕ್ಕದ್ದೆಂದು ಪ್ರದರ್ಶನಕ್ಕೆ ಎಲ್ಲ ಚಿತ್ರಗಳೂ ಬಂದು ಮುಟ್ಟುವ ಮೊದಲೇ ತೀರ್ಮಾನವಾಯಿತು. 'ಆನಂದನಲ್ಲದಿದ್ದರೆ ಈ ಹಣ ಕೂಡುತ್ತಿತ್ತೇ, ಅವನ ಹುರುಪಲ್ಲದಿದ್ದರೆ ಈ ಪ್ರದರ್ಶನ ನಡೆಯುತ್ತಿತ್ತೇ. ...' ಎಂದು ಮುಂತಾದ ಕಾರಣಗಳಿಂದ ಊರವರಿಂದ ಕೂಡ ಹಾಕಿದ ದುಡ್ಡಿನಿಂದ ಒಂದು ಚಿನ್ನದ ಪಾತ್ರೆಯನ್ನು ತಯಾರಿಸಿಟ್ಟರು.

ಜೀವನ ಬಹುಮಾನದ ಸುದ್ದಿಯನ್ನು ಕೇಳಿಯೂ ಅರಿಯನು. ಆದರೆ ಚಿತ್ರಕಲೆಯ ಪ್ರದರ್ಶನವೊಂದು ಊರ ಜಾತ್ರೆಯ ಹಬ್ಬದ ಕಾಲದಲ್ಲಿ ಏರ್ಪಡಿಸಲಾಗುವುದು ಎಂದು ಕೇಳಿ ತುಂಬ ಸಂತುಷ್ಟನಾದನು. ತನ್ನದೂ ಒಂದು ಇರಲೆಂದು ಗೊತ್ತುಮಾಡಿ, ಯಾವ ಚಿತ್ರವನ್ನು ಕಳಿಸಲಿ ಎಂದು ಯೋಚಿಸತೊಡಗಿದನು. 'ನಾಗೇಶ್ವರ,' 'ಶ್ರೀಮನ್ನಾರಾಯಣ,' 'ರಾಧಾಕೃಷ್ಣ,' 'ನಟರಾಜ' ಮುಂತಾಗಿ ತಾನು ಬರೆದಿಟ್ಟಿದ್ದ ಚಿತ್ರಗಳನ್ನು ಒಂದೊಂದಾಗಿ ಪರೀಕ್ಷಿಸತೊಡಗಿದನು. ಇವ್ಯಾವುವೂ ಮನಸ್ಸಿಗೆ ಬರಲಿಲ್ಲ. ಕೊನೆಗೆ ಆ ಬಡವೆಯ ಚಿತ್ರವನ್ನು ಪ್ರದರ್ಶನಕ್ಕೆ ಕಳುಹಿಸುವುದೆಂದು ತೀರ್ಮಾನಿಸಿದನು.

ಚಿತ್ರಕಲೆಯ ಪ್ರದರ್ಶನದ ಮಹೋತ್ಸವದ ದಿನವೂ ಬಂತು. ಜನ ಕಿಕ್ಕಿರಿದು ತುಂಬಿದ್ದರು. ಅಧ್ಯಕ್ಷರಾಗಿ ಒಬ್ಬ ಬಂಗಾಲೀ ಕಲಾವಿದರು ಬಂದರು. ಅಧ್ಯಕ್ಷರು ಪ್ರದರ್ಶನವನ್ನು ತೆರೆದು ನೆರೆದ ಸಭಿಕರ ಮುಂದೆ ನಿಂತು ಮಾತನಾಡಿದರು.

'ಸಾಹಿತ್ಯವಾಗಲೀ, ಚಿತ್ರವಾಗಲೀ ಜನಜೀವನದ ಪ್ರತಿಬಿಂಬವಾಗಿರಬೇಕೆಂಬುದೇ ಎಲ್ಲ ಹಿರಿಯರ ಮತ. ಹಾಗೆಂದರೆ ರೂಪಕ್ಕೆ ಅಲ್ಲಿ ಸ್ಥಾನವಿಲ್ಲ. ನಮ್ಮ ಜೀವನವೇ ಒಂದು ಕಾವ್ಯ, ಕಲೆ; ಅದರ ವ್ಯಾಖ್ಯಾನವೇ ಅದರ ಸಾಧನ. ನಮ್ಮ ಬಾಳು ಒಂದೊಂದು ರಸಭಾವದಿಂದ ಕೂಡಿದ್ದು, ಒಂದೊಮ್ಮೆಗೆ ಒಂದೊಂದು ಭಾವರೂಪವನ್ನು ಹೊಳೆಯಿಸುವುದು. ಇದನ್ನು ಉತ್ತಮ ಕಲಾವಿದನಾದವನು ಗುರುತಿಸಿಕೊಂಡು ಚಾಕಚಾಕ್ಯತೆಯಿಂದ ಬರೆದೆತ್ತಿಕೊಳ್ಳುವನು. ಇಂತಹ ಚಿತ್ರ ನನಗೆ ಇಲ್ಲಿ ಒಂದೇ ಕಾಣುವುದು. ಉಳಿದುವೆಲ್ಲ ಬರಿಯ ರೂಪದ ಅನುಕರಣೆಗಳು. ಅವು ಭಗವಂತನ ಸೃಷ್ಟಿಯನ್ನು ಹಾಸ್ಯಮಾಡುವಂತಿದೆ.....'

ಸಭಾಮಂದಿರದ ಹೊರಗಡೆ ನಿಂತು ಬಡವೆಯೊಬ್ಬಳು ಬೇಡುತ್ತಿದ್ದಳು. 'ಧರ್ಮಾತ್ಮರೇ ಧರ್ಮ ಕೊಡಿರಯ್ಯ!'

ಅಧ್ಯಕ್ಷರು ತನ್ನ ಮಾತನ್ನು ಮುಂದುವರಿಸಲಾರದೆ ಸುಮ್ಮನೆ ನಿಂತರು. ತಿರುಗಿ ಅದೇ ಕೂಗು. ಜೀವನ ಇದನ್ನು ಕೇಳಿದವನೇ ಥಟ್ಟನೆದ್ದು ಹೊರಗೆ ಓಡಿದನು. ಆ ಬಡವೆಯೇ ಅಂದು ಜೀವನನ ಕೈಯಿಂದ ತಂಗೂಳು ಉಂಡವಳು. ಈತನನ್ನು ಕಂಡೊಡನೆ ಆಕೆ ಬೆಚ್ಚಿದಳು. ಬೆರಗಾದಳು; ಒಡನೆ ಯಾಕೋ, ಇಲ್ಲಿಂದ ಓಡಿ ಹೋದಳು. ಅಧ್ಯಕ್ಷರು ಅದನ್ನು ನೋಡಿದರು. ಅವರು ತಿರುಗಿ ಮುಂದುವರಿಸಿದರು:

'ಗೆಳೆಯರೇ, ನಾನು ನಿಮಗೆ ಕಲೆಯ ಉದ್ದೇಶ ಕಾರ್ಯಗಳನ್ನು ಪ್ರತ್ಯೇಕವಾಗಿ ಇಲ್ಲಿ ವಿಸ್ತರಿಲು ಹೋಗುವುದಿಲ್ಲ. ಉತ್ತಮ ಕಲೆಯೇ ಜೀವನ ಕಲೆ; ಯಾವ ಕೃತಿ ಜೀವನದ ಪ್ರತೀಕವಾಗಿ, ಅದರ ಆತ್ಮ ಅಂತರಂಗಗಳನ್ನು ತೆರೆದು ತೋರಿಸುವುದೋ ಅದು ಉತ್ತಮ ಕಲಾಕೃತಿ. ಇವೊತ್ತು ಇಲ್ಲಿ ಕೂಡಿದ ಹಲವಾರು ಚಿತ್ರಗಳು ನಿಮ್ಮ ಮುಂದಿವೆ. ಅವುಗಳು ಈ ಸೂತ್ರಕ್ಕೆ ಅನ್ವಯಿಸುವುದೋ ಏನೆಂದು ತಿಳಿದವರಾದ ನೀವೇ ಯೋಚಿಸಬೇಕು. ಇಂದು ನೀವೆಲ್ಲ ಸೇರಿ 'ಸೌಂದರ್ಯಸುಧಾ' ಚಿತ್ರವನ್ನು ಬರೆದ ಶ್ರೀ ಆನಂದರಿಗೆ ಬಹು ಮಾನವೊಂದನ್ನು ಕೊಡುವ ಹಂಚಿಕೆ ನಡೆಸಿದೀರಿ. ಅದು ನನ್ನ ಕೈಯಿಂದಲೇ ಆಗಬೇಕೆನ್ನುವ ಆಗ್ರಹವನ್ನು ದಯೆಯಿಟ್ಟು ನೀವು ಬಿಡುವಿರಾದರೆ ನಾನು ಆ ಚಿತ್ರದ ಯೋಗ್ಯಾಯೋಗ್ಯತೆಯ ಕುರಿತು ನಾಲ್ಕು ಮಾತುಗಳನ್ನು ಹೇಳ ಬಯಸುತ್ತೇನೆ . . . . .'

ಅಧ್ಯಕ್ಷರ ಈ ಕೊನೆಯ ಮಾತುಗಳನ್ನು ಕೇಳಿದೊಡನೆ ಆನಂದನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಅವನ ಮೋರೆ ಕಪ್ಪಿಟ್ಟಿತು. ಜೀವನ ಅಚ್ಚರಿಯಿಂದ ಅಧ್ಯಕ್ಷರು ಇನ್ನೇನು ಹೇಳುವರೋ ಎಂದು ಕುತೂಹಲಗೊಂಡನು.

ಸಭೆ ಮೌನವಾಗಿದ್ದುದರಿಂದ, ಅಧ್ಯಕ್ಷರು ಮುಂದುವರಿದರು:

'ಈ ಚಿತ್ರಕಾರರು ಯಾವುದನ್ನು 'ಸೌಂದರ್ಯ ಸುಧಾ' ಎಂದು ಕರೆದಿದ್ದಾರೋ, ಅದು ಸೌಂದರ್ಯವೇ ಅಲ್ಲ. ರೂಪಕ್ಕೆ ಭಾವವಿಲ್ಲದಿದ್ದರೆ ಅದೇನು ಸೌಂದರ್ಯವೋ ಕಾಣೆ. ಈ ಚಿತ್ರವನ್ನು ಕಂಡರೆ ಅದೊಂದು ಸುಂದರ ಸ್ತ್ರೀಯ ಶಿಲಾಮೂರ್ತಿಯಂತೆ ಕಾಣುವುದಲ್ಲದೆ, ಅದು ಒಬ್ಬ ಜೀವಂತ ಸ್ತ್ರೀಯ ಭಾವ

ಚಿತ್ರದಂತೆಯೂ ಹೊಳೆವುದಿಲ್ಲ. ಹೆಣ್ಣಿನ ಅಂಗಾಂಗಗಳನ್ನು ಚಿತ್ರಕಾರರು ಚೆನ್ನಾಗಿಯೇ ಬರೆದಿದ್ದಾರೆ, ಒಂದೊಂದು ರೇಖೆಯಲ್ಲೂ ಅಚ್ಚುಕಟ್ಟಿದೆ; ಆದರೆ ಅದು ಬದುಕಿರುವವಳೊಬ್ಬಳೆಂದು ತೋರಿಸುವ ಶಕ್ತಿಯನ್ನು ಪಡೆದಿಲ್ಲ, ಅಲ್ಲದೆ ಸೌಂದರ್ಯದ ಸುಧೆಯನ್ನು ಚಿತ್ರಿಸಲು ಹೊರಟ ಈ ಚಿತ್ರಕಾರರು ಬರಿಯ ರೂಪೊಂದನ್ನು ಚಿತ್ರಿಸಿದರು. ಆದರಲ್ಲೂ ಅರ್ಥವಿಲ್ಲದಂತೆ, ಆ ಹೆಣ್ಣು ಬಾಗಿದ ಭಂಗಿ, ಕೈಯಲ್ಲಿ ಯಾಕೋ ಎತ್ತಿಕೊಂಡ ಹೂಗೊಂಚಲು; ಇವೇನು, ಯಾವ ಹುರುಳನ್ನು ಹೇಳಲಿವೆಯೋ! ಶಿಲಾಮೂರ್ತಿಯೊಂದರ ಕೈಯಲ್ಲಿ ಬಾಡಿದ ಹೂಗೊಂಚಲನ್ನು ಕೊಟ್ಟು, ಅದು ಸೌಂದರ್ಯ ವಿಶೇಷ ಎಂದರೆ ತಾವು ಚಿತ್ರಕಲೆಯಲ್ಲಿ ನುರಿತವರು ಇರಲಿ, 'ಕಾಮನ್ ಸೆನ್ಸ್' ಇದ್ದವರು ಯಾರಾದರೂ ಒಪ್ಪಲಾರರು.

'ಅತ್ತ ನೋಡಿರಿ—ಅದು ನನ್ನ ಮನಸ್ಸಿಗೆ ಹಿಡಿಸಿತು. 'ಧರ್ಮಾತ್ಮರೇ ಧರ್ಮ ಕೊಡಿ!' ಎಂದು ಬೇಡುವ ಚಿತ್ರ. ಆಕೆ ಸುಂದರಿ ಎನ್ನುವುದಕ್ಕೆ ಆಕೆಯ ಮೋರೆಯ ಸುಗುಣವಾದ ಲಕ್ಷಣ—ಆಕೆ ಬಡವೆಯೆನ್ನುವುದಕ್ಕೆ ಬರಿಯ ಬಟ್ಟೆಬರೆಗಳ ಚಿಂದಿತೊಡಿಸದೆ, ಬಡಕಲಾದ ಮೈಯನ್ನೂ ತೋರಿಸಿದೆ, ತಾಯಾಗಿ ಕೈಗೂಸೊಂದನ್ನು ಬಗಲಲ್ಲಿ ಹಾಕಿಕೊಂಡು ಬಿಕ್ಕೆಬೇಡಲು ಹೊರಟ ಹೆಂಗರುಳನ್ನು ಆ ಮಗುವನ್ನು ಅಪ್ಪಿಕೊಂಡ ವೈಖರಿ ಹೇಳುತ್ತದೆ. ಹಸಿದು ಬಸವಳಿದ ಬೇರೆ ಕಂಗಳಲ್ಲಿ ಮೂಡಿದೆ, ದೈನ್ಯದ ಕರುಣ ರೂಪಾಗಿ ನಿಂತಂತೆ ನಮಗೆ ಆ ಚಿತ್ರವನ್ನು ಕಂಡರೆ ಭಾಸವಾಗುವುದು—ಒಟ್ಟಿನಲ್ಲಿ ಚಿತ್ರ ನಮ್ಮನ್ನು ಮಾತನಾಡಿಸುತ್ತದೆ ಇದೇ ಕಲೆಯ ಸಫಲತೆಯೆನ್ನಬೇಕು.

ಇನ್ನು ಚಿತ್ರಕ್ಕೆ ಕೊಟ್ಟ ಹೆಸರೂ ಹಾಗೇ. ನಮ್ಮ ಅಂತರಂಗವನ್ನು ಕೆದಕಿ ಚಿತ್ರ ಮಾತನಾಡಿಸುತ್ತಿರುವಂತೆ, "ಧರ್ಮಕೊಡಿರಯ್ಯ ಧರ್ಮಾತ್ಮರೇ!" ಎನ್ನುವ ಮಾತು, ಸಾಜವಾಗಿ ಹೊರಟಂತೆ, ನಮ್ಮ ಎದೆಯಲ್ಲಿ ಪಡಿದನಿಗುಟ್ಟುವುದು. ಇದನ್ನು ಬರೆದ ಚಿತ್ರಗಾರರು ಈ ಹೆಣ್ಣಿನ ಬಾಳನ್ನು ಚೆನ್ನಾಗಿ ನಿರುಕಿಸಿ, ಆಕೆಯ ಸಂಕಟವನ್ನು ನೋಡಿ ಚೆನ್ನಾಗಿ ಕಳವಳಗೊಂಡಿರಬೇಕು. ಇದು ಅವರ ಅನುಭವದ ಸಾರ—ಆ ಹೆಣ್ಣುಮಕ್ಕಳ ಬಾಳಿನ ಪ್ರತೀಕ . . . . ಇಂತಹ ಚಿತ್ರಗಾರರಿಂದಲೇ ನಮ್ಮ ನಾಡಿನ ಕಲೆಯು ಉದ್ಧಾರವಾಗಬೇಕು. ಏಕೆಂದರೆ ಅವರ ಉದ್ದೇಶ ಧ್ಯೇಯ ಎರಡೂ ಪವಿತ್ರವಾದುದು; ಅವರ ಮಾರ್ಗ ನೇರಾದುದು, ಬೆಳಕು ಕಂಡುದಾಗಿದೆ.

"ಇವೊತ್ತಿನ ಬಹುಮಾನ ಶ್ರೀ ಆನಂದರಿಗೆ ಹೋಗಬೇಕೆಂದು ತಾವು ತೀರ್ಮಾನಿಸಿದ್ದೀರಿ. ಆದರೆ ತಮ್ಮ ಕ್ಷಮೆ ಬೇಡಿ ನಿಮ್ಮ ಮುಂದೆ ನನ್ನ ಅಭಿಪ್ರಾಯವೇನೆಂದು ಅರಿಕೆ ಮಾಡದೆ ಇರಲಾರೆ ನನ್ನನ್ನು ಅಧ್ಯಕ್ಷರಾಗಿ ಕರೆದ ಶ್ರೀ ಆನಂದರಿಗೆ ನಾನು ಋಣಿಯೇನೋ ಹೌದು. ಆದರೆ ಇಂದಿನ ಪ್ರದರ್ಶನದಲ್ಲಿ ಅವರು ಇಟ್ಟ "ಸೌಂದರ್ಯ ಸುಧಾ" ಎಂದಿಗೂ ಬಹುಮಾನಕ್ಕೆ ಯೋಗ್ಯವಲ್ಲ ಎಂದು ಹೇಳದೆ ಇರಲಾರೆ. ಅದು ನ್ಯಾಯವಾಗಿ ಆ ಬಡವೆಯ ಚಿತ್ರವನ್ನು ಬರೆದವರಿಗೆ ಹೋಗಬೇಕು. ಬೀದಿಗಿಳಿದು ನಾಚಿಕೆಯನ್ನು ಕೂಡಾ ಮರೆಸಲಾರದ ಸಂಕಟಪಡುತ್ತಿರುವ ಒಬ್ಬ ಹೆಣ್ಣು ಮಗಳು "ಧರ್ಮಾತ್ಮರೇ!" ಎಂದು ನಿಮ್ಮನ್ನು ಕರೆವುದು ಬರಿಯ ಆಡಂಬರದ ಮಾತಲ್ಲ. ನೀವು ಸತ್ಯ, ನೀತಿಯನ್ನು ಬಲ್ಲವರು. ಹೆಣ್ಣು ಮನೆಯ ಒಳಗೂ ಹೊರಗೂ ಇರುವವಳು, ಯಾರಾದರೂ ತಮ್ಮ ಧರ್ಮದಲ್ಲಿ ಒಂದೇ ಸಮ. ಆಕೆಯನ್ನು 'ಧರ್ಮ'ವನ್ನು ಕೊಟ್ಟು ರಕ್ಷಿಸಿರಿ ಎಂಬ ಧ್ವನಿಯೂ ಈ ಚಿತ್ರದ ಜೀವಾಳವಾಗಿದೆ. ಅದು ಬಹುಮಾನ ಪಡೆಯಲು ತಕ್ಕುದಾಗಿತ್ತು . . . . ನಿಮಗೆ ವಂದನೆಗಳು."

ಎಂದು ಅಧ್ಯಕ್ಷರು ಕುಳಿತುಕೊಂಡರು. ಆನಂದನು ಚುನಾಯಿಸಿದ ಸಮಿತಿಯವರು ಅವಾಕ್ಕಾದರು; ಒಬ್ಬರು ಇನ್ನೊಬ್ಬರ ಮೋರೆಯನ್ನು ನೋಡಿಕೊಂಡರು. ಆನಂದನಂತೂ ನಾಚಿಕೆಯಿಂದ ತಲೆ ಎತ್ತಿರಲಿಲ್ಲ. ಸಭೆಯಿಂದಲೂ ಯಾರೂ ಮಾತನಾಡಲಿಲ್ಲ.

ಕೊನೆಗೆ ವಿದ್ಯುತ್ ಪ್ರವಾಹದಂತೆ ಆನಂದ ತಾನು ಕುಳಿತಲ್ಲಿಂದ ಎದ್ದು ಅಧ್ಯಕ್ಷರ ಬಳಿ ನಿಂತು ಸಭಿಕರಿಗೆ ಹೀಗಂದನು: "ಗೆಳೆಯರೇ, ನಮ್ಮ ಕೂಟದವರು ಬಹುಮಾನದ ಗೊತ್ತುವಳಿಯನ್ನು ಸ್ವೀಕರಿಸುವಾಗ ಶ್ರೀ. ಜೀವನ ಅವರ ಚಿತ್ರ ನಮ್ಮ ಕೈಸೇರಿರಲಿಲ್ಲ. ಅದರಿಂದ ಅವರು ಅಧ್ಯಕ್ಷರು ಎತ್ತಿ ತೋರಿದ ಈ ತಪ್ಪು ಮಾಡಿದರು. ನಿಜಕ್ಕೂ ಈ ಬಹುಮಾನ ಆ ಬಡವೆಯ ಚಿತ್ರವನ್ನು ಬರೆದಿರುವ ನಮ್ಮ ಗೆಳೆಯ ಶ್ರೀ. ಜೀವನ ಅವರಿಗೆ ಸಲ್ಲಬೇಕು. ನಿಮ್ಮ ಪರವಾಗಿ ನಾನು ಅಧ್ಯಕ್ಷರನ್ನು ಈ ಕೆಲಸ ನೆರವೇರಿಸಿಕೊಡಬೇಕೆಂದು ಪ್ರಾರ್ಥಿಸುತ್ತೇನೆ...." ಅವನು ಅಲ್ಲಿಂದ ಇಳಿದು ಬಂದವನು ನೇರಾಗಿ ಹೊರಗೆ ಇಳಿದೇ ಹೋದನು. ನೆರೆದ ಸಭೆ ಮುಂದಿನ ಕಾರ್ಯವನ್ನು ನಿರ್ಣಯಿಸಿತು. ಅಧ್ಯಕ್ಷರು ಆಶೀರ್ವಾದದೊಂದಿಗೆ ಜೀವನನಿಗೆ ಐನೂರು ರೂಪಾಯಿ ಬೆಲೆಬಾಳುವ ಬಹುಮಾನವನ್ನು ಅರ್ಪಿಸಿದರು.

ಜೀವನ ಅಧ್ಯಕ್ಷರಿಗೂ ಸಭಿಕರಿಗೂ ಕೃತಜ್ಞತೆಯ ವಂದನೆಯನ್ನು ಅರ್ಪಿಸಿದನು. ಆನಂದನನ್ನು ಅವನು ಹುಡುಕಾಡಿದನು; ಅವನನ್ನೂ ಪ್ರತ್ಯೇಕವಾಗಿ ವಂದಿಸಬೇಕಾಗಿ ಅವನ ಇಚ್ಛೆಯಿತ್ತು. ಆದರೆ ಆನಂದ ತನಗಾದ ಅವಮಾನವನ್ನು ಸೈರಿಸಲಾರದೆ ನೆಟ್ಟಗೆ ಭೈರವಿಯ ಮನೆಯ ದಾರಿ ಹಿಡಿದಿದ್ದನು.

ಸಭೆಯು ಮುಕ್ತಾಯವಾಯಿತು.

ಜೀವನ ತನಗೆ ಬಂದ ಬಹುಮಾನವನ್ನು ಎತ್ತಿಕೊಂಡು ತನ್ನ ಕಿರು ಗುಡಿಸಲ ಕಡೆಗೆ ಸಾಗಿದ್ದನು. ದಾರಿಯಲ್ಲಿ, ಅಚ್ಚರಿಯೆನಿಸುವಂತೆ, ಅದೇ ಆ ಬಡವೆ ನಿಂತಿದ್ದುದನ್ನು ಕಂಡನು. ಒಡನೆ ಅವನು ಅವಳ ಬಳಿಸಾರಿ, ತನ್ನ ಕೈಯಲ್ಲಿದ್ದ ಚಿನ್ನದ ತಟ್ಟೆಯನ್ನು ಆಕೆಯ ಉಡಿಯಲ್ಲಿ ಹಾಕಿದನು: “ಇದು ನಿನ್ನದು— ಇಕೋ!”

ಆ ಒಡನೆ ಬೆಚ್ಚಿ ಬೆರಗಾದಳು “ಇದೇನು ಹುಚ್ಚು! ಎಲ್ಲಾದರೂ ಇದನ್ನು ಕಂಡರೆ ಜನ ಕದ್ದು ತಂದಿದ್ದಾಳೆ ಎಂದು ಎಣಿಸರೇ?” ಎಂದು ಆಕೆ ಅಂಜಿದಳು. ಇನ್ನೇನು ಇದನ್ನು ಆತನಿಗೇ ಕೊಡೋಣವೇ ಎಂದರೆ ಅವನು ಅಲ್ಲಿರಲಿಲ್ಲ; “ಇದು ನಿನ್ನದು, ಇಕೋ!” ಎಂದವನು ತಿರುಗಿ ಇದನ್ನು ಕೊಳ್ಳುವನೇ? ತಿರುಗೊಂದು ಆಶೆ. ಹೊನ್ನಲ್ಲವೇ? ಇರಲಿ, ಬದುಕಬೇಕು.

ಆಕೆ ಯೋಚಿಸಿದಳು: ಏನು ಮಾಡೋಣ ಇದರಿಂದ?

ಅದೇ ಆ ನದಿ. ಅದೇ ಆ ಕಲ್ಲು ಬಂಡೆ. ಹಿಂದೊಂದು ದಿನ ಅದರ ಮೇಲೆಯೇ ಕುಳಿತು ಜೀವನ ತನ್ನ ಬಾಳು, ಈ ಇಳೆಯ ಬಾಳನ್ನು ಕುರಿತು ಚಿಂತಿಸಿದ್ದನು. ಅದೇ ಬಂಡೆಯ ಮೇಲೆ ಕುಳಿತು, ಈ ಬಡವೆ ತನ್ನ ಕೂಸಿಗೆ ಮೊಲೆಯುಣಿಸುತ್ತ ಯೋಚಿಸಿದಳು.

“ನನ್ನ ಕೈಯಲ್ಲಿನ ಈ ಹೊನ್ನನ್ನು ಯಾರು ಕೊಳ್ಳುವರು?”

ಆಕೆ ಹಸಿದು ಬಸವಳಿದಿದ್ದಳು; ಕಂಗಾಲಾಗಿದ್ದಳು. ತನ್ನ ಹಸಿವಿನ ಸಂಕಟವನ್ನು ಈ ಹೊನ್ನಿನ ತಟ್ಟೆ ತಣಿಸುವಂತಿರಲಿಲ್ಲ. ಆಕೆ ನಕ್ಕಳು; ವಿಲಕ್ಷಣವಾಗಿ ನಕ್ಕಳು. ಕೂಸು ಅಳತೊಡಗಿತು. ಆಕೆ ಜೋರಾಗಿ ನಕ್ಕಳು; ಹುಚ್ಚರಂತೆ ನಕ್ಕಳು. “ಈ ಹೊನ್ನಿರುವ ತನಕ ನನ್ನ ಹಸಿವು ಜೋರಾಗುವುದು!” ಎಂದು ಆಕೆ ತನಗೆ ತಾನೇ ಹೇಳಿಕೊಂಡು ಹೊಲಸನ್ನು ಬಿಸಾಡುವಂತೆ, ಆ ಚಿನ್ನದ ತಟ್ಟೆಯನ್ನು ಹರಿವ ನೀರಿಗೆ ಎಸೆದಳು.

---

# ರೂಪಗ್ರಾಹಿ

ರಾಮು ಊರಿಗೆ ಬಂದಿದ್ದನು. ಮೊದಲೂ ಅವನು ಹುಟ್ಟೂರಿಗೆ ಬಂದವನಲ್ಲ. ಯಶವಂತರಾಯರು ಪರವೂರಿನಲ್ಲಿ ಊರಿಂದೂರಿಗೆ ವರ್ಗಾ ವರ್ಗಿಯಾಗಿ ಕೆಲಸದ ಮೇಲೇ ಇದ್ದವರು. ಹೆಂಡತಿ ಮಕ್ಕಳನ್ನು ಬೆನ್ನಿಗೆ ಹಾಕಿಕೊಂಡು ಈ ಕಳೆದ ೨೪ ವರುಷಗಳಲ್ಲಿ ಕಾಸರಗೋಡನ್ನೆ ಮರೆತಿದ್ದರು. ರಾಮು ಎರಡು ವರುಷದ ಹುಡುಗನಾಗಿರುವಾಗಲಷ್ಟೆ ತನ್ನ ಹುಟ್ಟೂರನ್ನು ನೋಡಿದ್ದು. ಮತ್ತೆ ದೊಡ್ಡವನಾದಾಗ ಹೋದಲ್ಲೆಲ್ಲ ಅವನಿಗೆ ಊರೆ; ಅಲ್ಲಲ್ಲಿ ಓದಿಕೊಂಡನು. ೧೪ ವಯಸ್ಸಿಗಾಗಲೇ ಮೆಟ್ರಿಕ್ಯುಲೇಷನ್ ಪರೀಕ್ಷೆ ಪಾಸು ಮಾಡಿದ್ದನು. ಬಳ್ಳಾರಿಯಿಂದಲೇ ನೇರಾಗಿ ಮುಂಬಯಿಗೆ ಹೋದ ರಾಮು ಈ ಬಾರಿ ಬರುವಾಗ ತುಸ ಹುರುಪಿನಿಂದೆ ಬಂದಿದ್ದ. ಅದು ಅವನಿಗೆ ಹೊಸ ಊರು! ತಾನು ಹುಟ್ಟಿದ್ದು ಇಲ್ಲಿಯೇ ಎಂದು ತಿಳಿದು ನೋಡುವ ಊರು.

ಕವಿಗಳು ಮೃದುಮಧುರವಾದ ಭಾವಗೀತೆಗಳನ್ನು ಬರೆದಿದ್ದಾರೆ. ಹುಟ್ಟಿನಾಡನ್ನು ಸ್ವರ್ಗದ ಸರಿಮಿಗಿಲಾಗಿ ಬಣ್ಣಿಸಿದ್ದಾರೆ. ರಾಮುವಿನ ಹೃದ ಯದಲ್ಲಿ ಇಂಥ ಸುಂದರ ಭಾವನೆ ತಾನಾಗಿ ಅರಳದಿದ್ದರೂ ಅದರ ಕಂಪು ತೆನೆ ತೆನೆಯಾಗಿ ಇಡುಗದಿದ್ದೀತೇ? ಒಲವಿಗೆ ಬಣ್ಣವಿಲ್ಲ, ಗುಣವಿಲ್ಲ; ಭಾವವಿದೆ. ಶೇಕ್ಸ್ಪೀಯರ್ ಕವಿಯು 'ಒಲವಿನ ಕಣ್ಣು ಕುರುಡು' ಎಂದಿದ್ದಾನೆ. ಆದರೆ ಒಲವು ಕುರುಡಾದರೂ ಬಗೆಯು ಕಣ್ಣೂ ಕುರುಡಾಗಬೇಕೇ? ಹುಟ್ಟೂ ರೆಂದು ಭಾವನೆಯ ಚಿತ್ತರವನ್ನು ಅಷ್ಟೇ ಸಂಕೋಚದಲ್ಲಿ ಹರಹಬೇಕೆ? ಹುಟ್ಟು ನಾಡಿನ ನೆನಹು ಹೃನ್ಮಂದಿರದ ಪಟಲದೊಳಗೇ ಸುತ್ತಿಸುಳಿದು ತನ್ನ ಭಾವ ನರ್ತನದಲ್ಲಿ ಯಾರ ಮನವ್ಯೆಯನ್ನೂ ತನ್ನ ಸರಲ ತಾನದೊಂದಿಗೆ ನಾಡಿಸುವ ಚಲ್ಲು ಇದೆ. ರಾಮೂನ ಹುಟ್ಟಿನಾಡು ಇಷ್ಟರಲ್ಲೇ ಹಿಂದೂದೇಶವನ್ನೇ ವಿಸ್ತರಿಸಿತ್ತು; ವಿಶ್ವವೈಶಾಲ್ಯವನ್ನು ಆವರಿಸಿತ್ತು. ಆದರೆ ಭಾರತ ಭೂಮಿಯಲ್ಲಿ ಯಾವ ಮೂಲೆಯಾದರೂ ಅವನಿಗೆ ಜೀವ ಇದ್ದದ್ದೆ. ನಮ್ಮ ದೇಹದಲ್ಲಿ ಅಂಗಾಂಗ ಇದ್ದ ಹಾಗೆ. ಮುಖ್ಯ ಆತನದು ನರ್ತಿಸುವ ಮನ; ಹಿಂದೂ ದೇಶದ ಒಂದೊಂದೂ ಗಿಡವೂ ಆತನ ಮನವನ್ನು ನರ್ತಿಸುತ್ತಿತ್ತು.

ಅದೇ ಉಲ್ಲಾಸದಿಂದ, ಮನದಿಂದ ಕಾಸರಗೋಡಿಗೆ ಬಂದಿದ್ದನು.

ಸೃಷ್ಟಿಯ ಚೆಲುವು ಒಂದೊಂದು ಕಡೆ ಒಂದೊಂದು ರೀತಿ; ಒಂದೊಂದು ಕಣ್ಣಿಗೆ ಒಂದೊಂದಾಗಿ. ಕೆಲವು ದಿನಗಳ ಹಿಂದೆ ಅವನಿಗೆ ತಂದೆ ಬರೆದಿದ್ದ ಓಲೆಯಿಂದಷ್ಟೆ ಇನ್ನು ಹೊರಡುವುದು ತನ್ನ ಹುಟ್ಟೂರಿಗೆ ಎಂದು ತಿಳಿದದ್ದು. ಆ ತಿಳಿವು ಆತನಲ್ಲಿ ಇನ್ನಷ್ಟು ಕುತೂಹಲವನ್ನೂ ತುಂಬಿತ್ತು. ಹಾಗೆ ಬಂದವನು ಈ ನಾಡಿನ ನೈಸರ್ಗಿಕ ಸೌಂದರ್ಯದಲ್ಲಿ ತನ್ಮಯತೆಯನ್ನು ಕಂಡನು. ತನ್ನ ಭಾವ ಅರಳಿದಾಗ, ಸ್ಫೂರ್ತಿಯ ಕಳೆಗೆ ರಸಾವೇಶವೂ ಕಲೆಬೆರೆತರೆ ಬೇರೆ ಹೇಳಬೇಕೇ? ಚಿತ್ರ ಸೃಷ್ಟಿಗೆ ಬೇಕು ಭಾವಸೌಂದರ್ಯ. ಅಂಥವು ಯಥೇಷ್ಟ ಇವೆ ಇಲ್ಲಿ. ಅಲ್ಲಿ ಇಲ್ಲಿನ ನೋಟ ನಿಲುವುಗಳನ್ನು ಬಣ್ಣಗಳ ನೆರವಿಗೆ ಎರವು ತಂದುಕೊಳ್ಳುವುದು ಆತನ ನಿತ್ಯದ ಪಾರವಾಗಿ ಹೋಯಿತು.

ಮುಂಜಾವು ಎಲ್ಲ ಜೀವರಾಶಿಗಳಿಗು ಒಂದೇ. ನಿಸರ್ಗದ ಈ ರಮ್ಯ ರಮಣೀಯ ಉದಯ ಮಹೋತ್ಸವವು ಎಲ್ಲ ಜೀವಿಗಳನ್ನೂ ಒಂದೆ ಲಹರಿಯಲ್ಲೆಬ್ಬಿಸುವುದು. ಈ ಉತ್ಸವದ ಸಂಭ್ರಮ ಉಲ್ಲಸವೊಂದೇ; ಉಲ್ಲಸದ ಕೇಳಿಯಲ್ಲಿ ಒಯ್ಯ್ಯಾಗಿ ಒಯ್ಯ್ಯಾಗಿ ಬೀಸುವ ತಣ್ಣೆಲರಿನಂತೆ, ಆ ಮಾತು ಹುಟ್ಟಿ ಬರುವುದು. ನಿಸರ್ಗವು ಯಾರಿಗೂ ತನ್ನ ಸೌಂದರ್ಯದ ಸುಧೆಯನ್ನು ಬಚ್ಚಿಡಲಿಲ್ಲ ಯಾವ ಜೀವದ ಹೂವನ್ನೂ ಚೆನ್ನಾಗಿ ನಗಿಸದಿಲ್ಲ. ನಿತ್ಯನಿರಂತರವೂ ಕರ್ಮಸಾಕ್ಷಿಯಾದ ಸೂರ್ಯದೇವನ ಕಣ್ಬೆಳಕಿನಲ್ಲಿ ಸತ್ಯದ ಹೊಲಬು ಕಂಡು ಕರ್ಮವನ್ನು ಮಾಡುವವನಿಗೆ ಯಾವ ಕೊರತೆ ಇದೆ? ಸೃಷ್ಟಿ ಒಂದು ವೇದಾಂತವನ್ನೇ ಮಾನವನ ಕಣ್ಣೆದುರು ಪುಟಪುಟಗಳನ್ನು ತಿರುವಿಹಾಕಿದೆ.

ಹೊತ್ತು ಮೂಡಿ ಒಂದು ಗಳಿಗೆಯಷ್ಟೆ ಸಂದಿತ್ತು. ಯಶವಂತರಾಯರು ತನ್ನ ಕೈಯಾರೆ ನೆಟ್ಟು ನೀರೆರೆದು ಬೆಳೆಸಿದ ಹೂಗಿಡಗಳು ಮನೆಯೆದುರಿನ ಹೂತೋಟವನ್ನು ಚೆಲುವು ಕೂಡಿಸಿದ್ದುವು ರಾಮು ಒಂದೊಂದೇ ತೊಟ್ಟಿಯನ್ನು ತರತರವಾಗಿ ನಿಲ್ಲಿಸಿ, ಕೇನ್‌ವಾಸಿನಲ್ಲಿ ಅವುಗಳನ್ನು ಬಣ್ಣಗಳೊಡನೆ ತೂಗಿಸುತ್ತಿದ್ದನು. ಹೀಗೆ ಅವನು ಇರಿಸಿದ ತೊಟ್ಟಿಗಳೇ ಚೆಲುವು ಅವುಗಳನ್ನು ಒಂದು ಕ್ರಮದಲ್ಲಿ ಇರಿಸಿದುದರಿಂದ ಅದರ ಸುಂದರ ಕಳೆಯನ್ನು ಏರಿಸಿದ ಹಾಗಾಗಿತ್ತು. ಕಲಾವಿದನ ಕೈಯಲ್ಲಿ ನಡೆಯುತ್ತಿದ್ದ ಕುಂಚದಲ್ಲಿ ಸೃಷ್ಟಿಯೂ ಸೌಂದರ್ಯವೂ ಒಂದೆರಕವಾಗಿ ರೂಪು ಪಡೆಯುತ್ತಿರುವಾಗ, ರಸಭಾವವೂ ಉಸಿರುಗೊಂಡ ಬಳಿಕ ಹೇಳುವುದೇನು? ಅದನ್ನೆ 'ಜೀವನ' ಎನ್ನುತ್ತಾರೆ. ರಾಮು 'ಆಶಾಜೀವನ' ಎಂಬ ಚಿತ್ರ ಬರೆಯುತ್ತಿದ್ದನು.

ಅದರಲ್ಲಿ ಕಲಾಜೀವನದ ಕಳೆ ಕೊನರಿತ್ತು.

ಜಯಾ, ಆತನ ತಂಗಿ ಓಡಿಕೊಂಡು ಬಂದು-“ಅಣ್ಣಾ ಹಳಿನೇಳು!” ಎಂದು ಒಂದು ಕಾಗದದ ಎಲೆಯನ್ನು ತಂದುಕೊಟ್ಟಳು. ತಾರೀಕು ಪಟ್ಟಿಯಿಂದ ಹರಿದ ಎಲೆ: ಹಿಂಬದಿಯಲ್ಲಿ ಹೀಗೆ ಬರೆದಿತ್ತು:

'Our bodies are our gardens, of which
our will are gardeners' —*Shakespeare*.

* * * *

'Gather, then, each flower that grows,
When the young heart overflows,
To embalm that tent of snows.

—*Long fellow.*

ರಾಮು ಅದನ್ನು ಓದುವಷ್ಟರಲ್ಲಿ “ಅಣ್ಣ, ಅಣ್ಣಾ! ಅಲ್ಲಿ ನೋಡು”! ಎಂದು ಜಯ ತನ್ನ ಪುಟ್ಟ ಕೈಗಳನ್ನು ತೋರಿ ಒಂದು ಹಕ್ಕಿಯನ್ನು ಕಾಣಿಸಿದಳು. ಬಣ್ಣಬಣ್ಣದ ಹಕ್ಕಿ. ಆ ಈ ಹೂಗಿಡಗಳ ಮೇಲೆ ಹಾರ್‍ಯಾಡಿ ವಿರಹ ಗೀತೆಯನ್ನೋ ಪ್ರೇಮ ಗೀತೆಯನ್ನೋ ಹಾಡುತ್ತಿತ್ತು. ರಾಮು ತಲೆಯೆತ್ತಿ ನೋಡಿದನು. ಗಿಡವೊಂದರ ಬಳುಕುವ ದಂಟಿನಲ್ಲಿ ಕುಳಿತು ತನ್ನ ಸುತ್ತಲು ಮೆರೆದಿದ್ದ ತೋಟದ ಸೌಂದರ್ಯದಲ್ಲಿ ತನ್ನ ಸಂತಸದ ಚೆಲ್ಲನ್ನು ಬೆಸೆಯೆಂದು ನಿಸರ್ಗವನ್ನು ಉದ್ದೇಶಿಸುವ ಭಾವೋನ್ಮಾದದ ಮೂಕಧ್ಯಾನ ಮಾಡುವಂತೆ ಅಚಲವಾಗಿ ತಲೆಯೆತ್ತಿ ಕುಳಿತಿತ್ತು, ಆ ಹಕ್ಕಿ. ರಾಮು ಯೋಚಿಸಿದ: “ಒಂದೇ ಗಳಿಗೆ ಹೀಗೇ ಕುಳಿತಿದ್ದರೆ!” ಅಹುದು; ಕಲಾವಿದನೊಬ್ಬನನ್ನು ಬೆರಗುಗೊಳಿಸುವುದಷ್ಟೆ ಅಲ್ಲ, ಮಾರುಗೊಳ್ಳುವ ಚೆಲುವಿನ ನಿಧಿಯಿದ್ದಿತದು. ರಾಮು ನಿಜಕ್ಕೂ ಮೂಗುವಟ್ಟಿದ್ದ; ವಿಸ್ಮಿತನಾದ. ಆ ಹಕ್ಕಿಯ ಮೈಯಲ್ಲಿ ಬರೆದ ಬಣ್ಣಗಳ ವಿಚಿತ್ರ ಸಂಧಾನವು ಹಿರಿಯ ಕಲಾವಿದನೊಬ್ಬನ ಕೈವಾಡದ ಸಾಕ್ಷಿ. ಅದರ ಒಂದೊಂದೇ ಬಣ್ಣದ ಬರೆಗಳನ್ನು ಗುರುತಿಸತೊಡಗಿದಂತೆ ರಾಮು ಎಣಿಕೆ ಹಾಕಿದ: “ಎಷ್ಟು ಸುಂದರವಾಗಿದೆ; ರಮ್ಯವಾಗಿದೆ; ಸತ್ಯವಾಗಿದೆ. ಆದರೆ ಈ ಹಿರಿಯ ಕಲಾವಿದನ ರುಚಿಧರ್ಮ ಇನ್ನೆಂಥಾ ಪಾಕದ ಸವಿಯೋ! . . . . .” ಹಕ್ಕಿ ಹಾರಿಹೋಯಿತು! ರಾಮು ನಿಟ್ಟುಸಿರಿಟ್ಟು ಕುಂಚವನ್ನು ಕೆಳಗಿಟ್ಟನು. ಶೂನ್ಯ ಮನಸ್ಸಿನಿಂದ ಅದು ಹಾರಿ ಹೋದ ದಿಕ್ಕಿಗೆ

ಕಣ್ಣೋಡಿಸಿದನು. ಜಯಾ 'ಕೂs!' ಎನ್ನುತ್ತ ರೈಲುಗಾಡಿಯ ಆಟವನ್ನು ಆಡಿಕೊಂಡು 'ಟಿಸ್-ಬುಸ್-ಬುಸ್-ಬುಸ್' ಎಂದು ಕೈಕಾಲು ಬೀಸಿಕೊಂಡು ರೈಲು ಬಿಟ್ಟಳು. ಅಷ್ಟಾಗುವಾಗ—

ಯಶವಂತರಾಯರ ನೆರೆಗೆ ಜೋಡಿದಾರರ ಮನೆಯಿದೆ. ಜೋಡಿದಾರರೂ ಒಂದು ತೋಟ ಮಾಡಿದ್ದಾರೆ. ಯಶವಂತರಾಯರು ಮಾಡಿದ್ದಾರಲ್ಲ? ನಮ್ಮ ಮನೆಗೆ ಮುಂದೂ ಇರಬೇಕು ಹೂದೋಟ" ಎಂದುಕೊಂಡು ಹಾಗೆ ಮಾಡಿಸಿದ್ದು ಅವರು. ಜೋಡಿದಾರರ ಮಗಳು-ಒಬ್ಬಳೇ ಮಗಳು-ವಾಸಂತಿ ಪತಂಗದಂತಿರೋ ಹೆಣ್ಣು. ಹೂವಿಂದ ಹೂವಿಗೆ ಹಾರ್‍ಯಾಡುವ ಪತಂಗದ ಚೆಲ್ಲದಂತೆ ಆಕೆ ಉಯ್ಯಾಲಿಡುವ ನಡಿಗೆಯ ನೊಬಗನ್ನು ನೋಡದ ತರುಣರಿಲ್ಲ. ಅದ್ಭುತ ರಮ್ಯ ಅಗಮ್ಯ ದೃಶ್ಯವೆಂದುಕೊಂಡು ಕದ್ದಾದರೂ ನೋಡಲು ಬರುತ್ತಿದ್ದರು. ಕಣ್ಣಿನ ಪಾಪವಾಗಲಿ ಕಳೆದು ಹೋಗಲಿ ಎಂದಿರಬಹುದು. ಹೂಗಳು ಅರಳಿ ಮುಗಮುಗಿಸುವ ನಗೆ ಸೂಸಿದಾಗ ತಾನೂ ಉಲ್ಲಸದಲ್ಲಿ ನಗುತ್ತ ಕುಣಿಯುತ್ತ ತೋಟ ತುಂಬ ಚಿಗರಿಯಂತೆ ಓಡ್ಯಾಡುವುದು ಆಕೆಯ ನಿತ್ಯದ ಪಾಠ. ಚಿಣ್ಣನಂತೆ ಕುಣಿದು ಆ ಪತಗ ಈ ಹಕ್ಕಿಯೆಂದು ಬೆನ್ನು ಹತ್ತುವಾಗ ನೋಡಿದವರು, "ಹುಡುಗಿಗೆ ಉನ್ಮಾದ!" ಎನ್ನುತ್ತಿದ್ದರು. ಕುಲೀನ ಹೆಂಗಸರು ಗುಟ್ಟಾಗಿ, "ಹೆಣ್ಣಿಗೆ ವರುಷ ತುಂಬಿತು. ಈಗಲೂ ಹುಡುಗರೊಟ್ಟಿಗೆ ಆಡಲಿಕ್ಕೆಂದೇ ಹೋಗುತ್ತಾಳೆ ಸಾಲೆಗೆ. ಜೋಡಿದಾರರು ಇನ್ನೂ ಗಂಡನೊಂದಿಗೆ ಕೂಡಿಸಿಲ್ಲ ಹುಡುಗಿಯನ್ನು" ಎನ್ನುತ್ತಿದ್ದರು. ಅದು ಎಷ್ಟು ನಿಜ, ಎಷ್ಟು ಸುಳ್ಳೆಂದು ಈ ಕತೆ ಬರೆದವರಿಗೆ ಗೊತ್ತಿಲ್ಲ. ಹೇಳಿದ ಜನವೂ ಬೇರೆ; ಅವರೇನೂ ವಿಸ್ತರಿಸಲಿಲ್ಲವಾದುದರಿಂದ ಕತೆಗಾರರು ಆ ಮಾತು ಬಚ್ಚಿಡಲಾರದಾದರೂ ಬಚ್ಚಿಡಬೇಕಾಗಿದೆ. ಆದರೆ ಒಂದು ಮಾತು ಗೊತ್ತಿದೆ. ಹುಡುಗಿಗೆ ಆಗ ೧೭ ವರುಷ ದಾಟಿತ್ತು. ಎಸ್. ಎಸ್. ಎಲ್. ಸಿ. ಪರೀಕ್ಷೆ ಕಟ್ಟಿದ್ದಳು. ಸಾಲೆಗೆ ಹೋಗುವ ಎಲ್ಲ ಹುಡುಗಿಯರಂತೆ ಸಿಂಗಾರವಾಗಿರಲು ಪ್ರೀತಿ. ಎಲ್ಲ ಹುಡುಗಿಯರಂತೆ ತನಗೂ ಹೃದಯವಿರಬೇಕೆಂದು ಆಸೆ. ಹೀಗೆ ಅವಳು ನಲಿದಾಡಿದ್ದಳು. ತೋಟದಲ್ಲೆ ಹೆಚ್ಚಿನ ಸಮಯ ನೂಕುವಳು. ಆಕೆಗೆ ಅದೊಂದು ಆನಂದ. ಈ ಆನಂದದ ಸಿರಿಯಲ್ಲಿ ತೇಲಿ ಬಂದಿತು ಆ ಹಕ್ಕಿ. ವಸಂತನ ದೂತನಂತೆ ಬಂದು ಹಾಡಿಹೋಯಿತು. ವಾಸಂತಿ ಅದಕ್ಕೆ ಮನಸೋತಳು. ಅದು ನಲಿಯಿತು, ಉಲಿಯಿತು, ಹಾರಿತು. ವಾಸಂತಿಯೂ

ನಲಿದಳು, ಎದೆಯಾರ ಉಲಿದಳು, ಅದರ ಬೆನ್ನು ಹತ್ತಿ ಓಡಿದಳು—ಪಕ್ಕಗಳಿರುತ್ತಿದ್ದರೆ ಹಾರುತ್ತಿದ್ದಳೋ ಏನೋ! ಆದರೆ ಆಕೆಗೆ ಒಲವಿನ ಪಕ್ಕಗಳೆರಡೂ ಚಿಗುರುತ್ತಿದ್ದುವಷ್ಟೆ; ಒಂದಿಷ್ಟು ಮನವನ್ನು ಹಾರಿಬಿಟ್ಟುವು . . . . . . ಹಕ್ಕಿ ಯಶವಂತರಾಯರ ತೋಟವನ್ನು ಹೊಕ್ಕಾಗ ಆಕೆ ಬೇಲಿಯ ಸಂದಿನ ಮರೆಗೆ ನಿಂತು ನೋಡುತ್ತಿದ್ದಳು.

—ಹಾರುವ ಹಕ್ಕಿ ಹೋದಾಗ ಇನ್ನೊಂದು ಹಕ್ಕಿ ಬೇಲಿಗೆ ಒರಗಿ ನಿಂತಿರುವುದನ್ನು ರಾಮು ನೋಡಿದ. ಆಕೆಯೂ ನೋಡಿದಳು. ವಾಸಂತಿ ತನ್ನ ಸಹಜವಾದ ಕದಡುನಗೆಯೊಂದನ್ನು ಮಾಟವಾಗಿ ಚೆಲ್ಲಿದಳು. ರಾಮು ಅದರ ಬಗೆಯ ಹೊಲಬನ್ನು ಅರಿಸಿಕೊಳ್ಳುವ ಹವಣಿನಲ್ಲಿ ನಗೆಯನ್ನು ಮೆರೆಸುವ ಆಕೆಯ ಸಹಜ ಸೌಂದರ್ಯಕ್ಕೆ ಮಾರುಹೋದನು. ಎಲ್ಲ ಕಲಾವಿದರಂತೆ ರಾಮು ಸೌಂದರ್ಯದ ತಪವನ್ನು ಆಚರಿಸಿದವನಲ್ಲ. ಮುಖ್ಯ ಚೆಲುವಿನವ ಒಲವೂ ಬೆರೆತಿದ್ದರೆ? ಅಲ್ಲಿ ಅವನಿಗೆ ಜೀವವಾಗಿದ್ದ ಭಾವವನ್ನು ಕಂಡನು. ವಾಸಂತಿ, "ಹಕ್ಕಿ ಹಾರಿ ಹೋಯಿತು ನೋಡಿದಿರಾ?" ಎಂದು ಇನಿದಾದ ತೊದಲು ಉಲಿದಳು. ಲಜ್ಜೆ ಬೆರೆತ ಚಿವುಟು ನಗೆಯೊಂದು ಚಿಮ್ಮಿತು. ರಾಮು, "ಹೌದು ನೋಡಿದೆ!" ಎಂದು ಆಕೆಯ ನೋರೆಯಯನ್ನೆಲ್ಲೋ ನೋಡಿದ ನೆನಹನ್ನು ಗಾಳಿಸುತ್ತ ಬರಿಮೊಗನಾಗಿ ಹೇಳಿದ.

"ಅದೇನು ಮಾಡುತ್ತೀರಿ, ಅಲ್ಲಿ?" ಆಕೆ ಆತುರದಿಂದ ಕೇಳಿದಳು, ಒಲವು ಕರೆದು ಮಾತನಾಡಿದಳು.

"ಚಿತ್ರ ಬರೆಯುತ್ತೇನೆ—" ರಾಮು ಮಾರ್ನುಡಿದ . . . .

ಜಯಾ ಬಿಟ್ಟ ಗಾಡಿ ದಡಲ್ಲನೆ ನಿಂತಿತು. "ಅಣ್ಣಾ, ಇಂಜಿನ್ ಸಾಫ್ ಆತು!" ಎಂದಳು. ಇಬ್ಬರೂ ಜಯಾ ಇದ್ದ ಕಡೆಗೆ ಹೊರಳಿದರು. ಜಯ ಎರಡೂ ಕೈಗಳನ್ನೆತ್ತಿ "ರೈಲು ಸಾಫ್! ನೀರಿಲ್ಲ, ಪೆಟ್ರೋಲೂ ಇಲ್ಲ!" ಎಂದಳು. ವಾಸಂತಿ ಬಿದ್ದು ಬಿದ್ದು ನಗಲಾರಂಭಿಸಿದರು. ರಾಮು ಜಯಾನನ್ನು ಕೂಗಿ ಹೇಳಿದ: "ಇಲ್ಲಿ ಬಾ ನಾನು ಪೆಟ್ರೋಲು ನೀರು ತುಂಬುತ್ತೇನೆ" ಎಂದ ನಗುತ್ತಲೇ. ಜಯಾ "ನೀನು ಚಿವುಟುತ್ತೀ ಬೇಡ!" ಎಂದು ನಗುತ್ತ ಮನೆಯೊಳಗೆ ಓಡಿಹೋದಳು. ತಿರುಗಿ ನಾಲ್ಕೂ ಕಣ್ಣುಗಳು ಒಂದಾದುವು. ಅಷ್ಟರಲ್ಲಿ ಜೋಡಿದಾರರು ಕೂಗಿದ ದನಿ ಕೇಳಿಸಿತು. ವಾಸಂತಿ ಚಿಗಿದೋಡಿದಳು. ರಾಮು ಆಕೆಯ ಚೆಂಡುಮೋರೆಯನ್ನು ತನ್ನ ಚಿತ್ರಭಿತ್ತಿಯಲ್ಲಿ ಚಿತ್ರಿಸುತ್ತ

ದಿನಕನಸು ಕಂಡನು. ಕುಂಚಗಳು ಮತ್ತೆ ಆತನಿಗೆ ಅವಿಧೇಯತೆಯನ್ನು ತೋರಿದುವು. ರಾಮು ಉದಾಸೀನತೆಯಿಂದ ಎದ್ದನು.



ರಾತ್ರಿಯ ಹೊತ್ತು ಬೆಳದಿಂಗಳು ಚೆಲ್ಲಿತ್ತು. ನಿಸರ್ಗದ ನೀರವ ನಿರಂಕುಶ ಪ್ರಭೆ ನಿರಾಳದಲಿ ಸಿರಿದು ನಿರುತವಾಗಿತ್ತು. ಪ್ರಕೃತಿಯ ಮಡಿಲಲ್ಲಿ ರಸರಾಶಿಯು ಹಾಸಿತ್ತು ಕವಿಗಳು ಈ ಸೊಬಗನ್ನು ಶಬ್ದಗಳ ಬಣ್ಣಕ್ಕೆ ಎರವು ಮಾಡುತ್ತಿದ್ದರು. ಆದರೆ ಇಂದಿನ ಕವಿಗಳಲ್ಲಿ ವಿರಹಗಾನವನ್ನು ಬರುವುದಕ್ಕೆ ಬೆಳದಿಂಗಳ ರಾತ್ರಿಯನ್ನು ಅರಸಬೇಕಾದುದೇನಿದೆ? ಪುಸ್ತಕದ ರಾಶಿಯೂ ಬಿದ್ದಿರುವುದು ಬೇರೆ; ಹಸಿವಿನ ಹುಯಿಲು ಕರಕರೆ ಮಾಡುವುದು ಬೇರೇ ಇದೆ. ಕವಿಗಳ ಪೀಳಿಗೆ ಈಚೆಗೆ ನೈಜದದಿಲ್ಲ. ವಿಲುಪ್ತವಾದ ಜೀವದಲ್ಲಿ ಸೌಂದರ್ಯದ ಸಿರಿಯನ್ನು ಭಾವಿಸುತ್ತಾರೆ ಅಷ್ಟೆ.

ವಾಸಂತಿ ಇಂಥ ರಾತ್ರಿಯಲ್ಲಿ ಈ ತರದ ಸೌಂದರ್ಯವನ್ನು ಎಷ್ಟೋ ಬಾರಿ ನೋಡಿದ್ದಳು. ಕತೆ ಕಾದಂಬರಿಗಳನ್ನು ಓದುತ್ತಿದ್ದಾಗ ಆಕೆ ಒಂದೊಂದು ಸಲ ಯೋಚಿಸುತ್ತಿದ್ದಳು: "ನನ್ನ ಜೀವನದಲ್ಲಿ ಬೆಳದಿಂಗಳಿನ ಉದಯವೇ ಆಗಲಿಲ್ಲವೇಕೆ? ಆ ಸೊಬಗು ಎಂಥದೆಂದು ನಾನು ನೋಡಿಯೇ ಇಲ್ಲ!" ಇಂದು ಅಂಥ ತಿಂಗಳ ಉದಯವನ್ನು ನೋಡಿದಳು; ಯೋಚಿಸತೊಡಗಿದಳು– "ಬೆಳದಿಂಗಳು ಉದಿಸಿದೆ; ಆದರೆ ಅದರ ಸುಂದರವೇನು ಸೊಗಸು?" ಆ ಸೊಗಸಿನ ಅರ್ಥ ಹೇಗಿರಬೇಕು? ಆಕೆಗೆ ಅನುಭವ ಹೇಗಾಗಬೇಕು? ಅದು ತೀರ ಹೊಸತಾದರೂ, ತಿಳಿದುಕೊಳ್ಳುವ ಹಂಬಲ ತೀರದೆ ಇದೆ.

ಯಶವಂತರಾಯರ ಮನೆಯ ಉಪ್ಪರಿಗೆಯಲ್ಲಿ ದೀಪ ಇನ್ನೂ ಉರಿಯುತ್ತಲೆ ಇತ್ತು. ರಾಮು ತಾನು ಬರೆದ ಚಿತ್ರಗಳನ್ನೇ ನೋಡುತ್ತ ನೋಡುತ್ತ ಏನನ್ನೋ ನಿರುಕಿಸುತ್ತಿದನು. ದೀಪದ ಬೆಳಕು ಕಿಟಿಕಿಯಿಂದಾಗಿ ಮಂದವಾದ ಸೋನೆಬೆಳಕನ್ನು ಕಳಿಸಿ ಬೆಳದಿಂಗಳೊಂದಿಗೆ ಲೀನವಾಗಿತ್ತು. ವಾಸಂತಿ ತನ್ನ ಕಿರುಮನೆಯ ಕಿಂಡಿಯನ್ನು ತೆರೆದು ನಿಂತು ನೋಡುತ್ತಿದ್ದಳು. ಬೆಳದಿಂಗಳ ಹಾಲು ಬೆಳಗಿನಲ್ಲಿ ಕರಗಿದ ಮಂದವಾದ ದೀಪದ ಬೆಳಕು ಕರಗಿ ತಂಪಾಗಿ ಸೊಂಪಾಗಿ ಬಂದು ವಾಸಂತಿಯ ಮುದ್ದಾದ ಮೋರೆಯನ್ನು ಮುದ್ದಿಡುತಿತ್ತು. ಆಕೆ ಪುಳಕಗೊಂಡೆಚ್ಚತ್ತಳು. ಮನವು ನಿಂತಲ್ಲಿ ನಿಲ್ಲುತ್ತಿರಲಿಲ್ಲ.

ಟಿನ್! ಟಿನ್! ಟಿನ್! . . . . . . ಟಿನ್! ಗಡಿಯಾರ ಹತ್ತು ಗಂಟೆಯನ್ನು ಬಾರಿಸಿತು.

"ವಾಸಂತೀ ನಿದ್ದೆ ಬರೋಲ್ಲೇನು? ನಾಳೆ ಓದಬಹುದು. ಮಲ ಕ್ಕೋಮ್ಮ!" ಎಂದು ಆಚೆಯ ಕೋಣೆಯಲ್ಲಿ ಮಲಗಿದ್ದ ಜೋಡಿದಾರರು ಎಚ್ಚರಿಸಿದರು. "ಮಲಕ್ಕೊತ್ತೇನಪ್ಪಾ" ಎಂದು ಆಕೆ ಒಯ್ಯನೆ ಮೇಜಿನ ಸನಿಹಕ್ಕೆ ಸಾರಿದಳು. ಆಕೆಯ ಮನಸ್ಸು ಅಲ್ಲಿರಲಿಲ್ಲ. ದೀಪವನ್ನು ಸಣ್ಣದು ಮಾಡಿದಳು. ತಿರಿಗೆ ಕಿಂಡಿಯ ಸಿಟ್ಟಿಗೆಗೆ ಒರಗಿ ನಿಂತಳು. ಆಕೆಯ ಮೈಮನ ಗಳು ನೆರೆಮನೆಯ ಉಪ್ಪರಿಗೆಯಲ್ಲಿ ಆಸರೆಗೊಂಡಿದ್ದುವು!

ವಾಸಂತಿ ಕಿಟಿಕಿಯಲ್ಲಿ ತಲೆಹಾಕಿ ಹೊರಗಿನ ಪ್ರಪಂಚವನ್ನು ನೋಡಿ ದಳು. ಕವಿಗಳು ಬಣ್ಣಿಸಬಹುದಾದ ಭಾವ ಆಕೆಯ ಕಿರಿದಾದ ಎದೆಗೆ ಹೊಳೆಯಲಿಲ್ಲ ಮುಖ್ಯ, ತೀರದ ಸಂಗಾತಿಯೊಬ್ಬನು ಈ ಅಚಲ ಸೌಂದರ್ಯ ದಲ್ಲಿ ತನ್ನ ಭಾವಗೀತೆಯನ್ನು ಬಿಂಬಿಸುವಂತೆ ಕಂಡಳು. ಈಕೆ ಅದನ್ನು ಆಡ ಲಿರುವಳೇನು? ಆಕೆ ಮೈಮುರಿದು ನರ್ತಿಸುವ ನಟಿಯಂತೆ ಗಾಳಿಗೊಳೆಯುವ ಕೋಮಲ ಲತೆಯಂತೆ, ಮೈಯಲುಕಿಸತೊಡಗಿದಳು. ಯಾರ ಅಗಲಿಕೆಯ ನೋವೋ, ಆ ಮೈತ್ರಿಯ ಭಾವವೇನೋ, ಯಾರದೋ, ಯಾರಿಗೆ ಗೊತ್ತು?

ಪ್ರೇಮದ ಕುರಿತು ತರುಣ ತರುಣಿಯರು ಹೇಳಿಕೊಳ್ಳುತ್ತಾರೆ. ಅದು ಹೀಗೇ ಇದೆ, ಅದರ ರೂಪು ಇದೇ ಎಂದು ಯಾರಾದರೂ ಪ್ರಕಟಿಸಿದವರು ಇದ್ದಾರೆಯೇ? ಇಂಗ್ಲಿಷ್ ಕವಿಯೊಬ್ಬನ ಎರಡು ಚರಣಗಳು ನೆನಹಿಗೆ ಉರಟ ಣಿಸಿಹುವು:

"Love is the root of creation; God's essence
worlds without number
Lie in this bosom like children"

ವಾಸಂತಿ ಅದನ್ನೇನೆಂದು ತಿಳಿದುಕೊಂಡಳೋ! ಹೇಳುವುದು ಹೇಗೆ? ಆದರೆ ಆಕೆಯರಸಿದ ಪ್ರೇಮದ ಸೀಮೆಯಲ್ಲಿ ಮುಳ್ಳು ಹೆಂಟೆಗಳು ತಪ್ಪಿರಲೆಂದು ನಿತ್ಯ ಧ್ಯಾನಿಸುತ್ತಿದ್ದಳು.

ವಾಸಂತಿ ವರವಲಯವನ್ನು ನೋಡಿ ನಿಟ್ಟುಸಿರುಗರೆದಳು. ಸುಳಿವ ತಂಗಾಳಿಯಲ್ಲಿ ಅದು ತೂರಿ ಹೋಯಿತು. ಆಕೆಯ ವಿರಹತಾಪವನ್ನು ಮಂದಮಾರುತನು ಸಾಗಿಸಿಕೊಂಡು ಹೋದನು. ಆದರೆ ವಾಸಂತಿ ಬೆಳದಿಂಗಳ

ಈ ಸುಂದರ ನಿಶಿಯಲ್ಲಿ ಹೀಗೆ ಚೆಲುವಾಗಿ ನಿಂತಿರುವುದನ್ನು ನೋಡಿ, ಮುಟ್ಟಿ ತಣಿದ ಮಾರುತನೇ ಮಾರುಹೋದರೇ? ನೀರ ನ್ಯೆಯನ್ನು ಎರಚಾಡುವ ಗಾಳಿಗೆ ಅದೇ ಸೊಗಸಾದೀತೇ? ಮಾರುತನು ಆಕೆಯನ್ನು ಸುತ್ತುಗಟ್ಟಿ ಸುಳಿಯ ತೊಡಗಿದನು. (ಚಂದ್ರಿಕೆ ಬೇರೆ ಬಾನ್ಬಣ್ಣನ್ನು ಕದ್ದು ತಂದು ನಿಸರ್ಗದ ರಮಣೀಯ ಮೌನಧಾಮದಲ್ಲಿ ತನ್ನ ನಿರ್ಜರ ಬೆಳಕಿನ ಜಲಕಲತಾನದಲ್ಲಿ ಕ್ರೀಡಿಸುತಿತ್ತು.) ಈಗ ಚಂದ್ರನೇಕೆ ಮೂಕಾಗಿ ನಗುತ್ತಿದ್ದಾನೆಂದು ವಾಸಂತಿಗೆ ಯೋಚಿಸಿದರೂ ಹೊಳೆದು ತೋರಲಿಲ್ಲ. .....ಟಿನ್! ಟಿನ್! ಟಿನ್! ಹನ್ನೊಂದಾಯಿತು.

ರಾಮು ಇನ್ನೂ ದೀಪ ಆರಿಸಿರಲಿಲ್ಲ. ವಾಸಂತಿಗೆ ನಿದ್ದೆ ಹತ್ತ ಲೊಲ್ಲದು.... ಹನ್ನೊಂದೂವರೆಯಾಯಿತು...... ಹನ್ನೆರಡು ಹೊತ್ತು ನಿಲ್ಲುತ್ತದೆಯೇ? ಸಾಗಿದ್ದು ಸಾರಿತು.

ಮೆಲ್ಲನೆ ಆ ದೀಪ ಕತ್ತಲೆಯಲ್ಲಿ ಕರಗಿ ಹೋಯಿತು. ವಾಸಂತಿ ನೀಳಾದ ಉಸಿರು ಒಳಹೊರಗೆ ನೂಕಿಕೊಂಡಳು, ಜೋರಾಗಿ. ಹಾಸಿದ ಹಾಸಿಗೆಯ ಮೇಲೆ ಬಿದ್ದು ಹೊರಳಾಡಿದಳು. ಆಕೆಯ ಧ್ಯಾನದಲ್ಲಿ ನಿದ್ದೆ ಬಹು ಮೆಲ್ಲನೆ ಎಡವಿತಡವಿ ಬಂತು. ಅಲ್ಲದಿದ್ದರೆ ಪ್ರೇಮಿಗಳಿಗೆ—ಅಲ್ಲ ವಿರಹಿಗಳಿಗೆ ನಿದ್ದೆ ಅಷ್ಟೊಂದು ನಿಧಾನವಾಗಿ ಮೋರೆಗಾಣಿಸುವುದ್ಯಾಕೋ!

●

ಕ್ರಿಸ್‌ಮಸ್ ರಜೆ ಬಂತು. ವಾಸಂತಿ ಮನೆಯಲ್ಲೇ ಇರುತ್ತಿದ್ದಳು. ಯಶವಂತರಾಯರು ನಿವೃತ್ತರಾಗಿ ಕಾಸರಗೋಡಿಗೆ ಬಂದು ಸ್ವಂತದ ಮನೆ ಮಾಡಿಕೊಂಡು ಇರಹತ್ತಿದ ಮೇಲೆ ಜೋಡಿದಾರರಿಗೆ ಹೊತ್ತು ನೂಕಲು ಸಲುವ ದಾರಿ ಸಿಕ್ಕ ಹಾಗಾಯಿತು. ಯಶವಂತರಾಯರು ಸಬ್ ಅಸಿಸ್ಟಾಂಟ ರಾಗಿದ್ದಾಗ ಕಂಡು ಕೇಳಿದ ಕತೆಗಳನ್ನೋ, ತಿರುಗಾಡಿದ ನಾಡು ಸೀಮೆಗಳನ್ನೋ ಚಿತ್ರರಿಸಿ ಬಣ್ಣಿಸುತಿದ್ದರು. ಸಂಜೆಯ ಹೊತ್ತಿಗೆ ಇಬ್ಬರೂ ಜತೆಯಾಗೇ ಜಮೀನಿನ ಬಯಲು ಸುತ್ತಬರುವುದು ಮಾಮೂಲು ಆಗಿಹೋಯಿತು. "ಇದನ್ನು ನನ್ನ ತಂದೆ ಕಟ್ಟಿಸಿದರು; ಬಹು ಪುರಾತನ ಕೆರೆಯಿದು. ಈ ದೇವ ಸ್ಥಾನವನ್ನು ನನ್ನ ಅಜ್ಜ ಉದ್ಧರಿಸಿದರು. ಆ ಬಯಲು, ಈ ಮನೆ, ಇವನ್ನು ನಾನು ಸ್ವಂತ ಉಂಟುಮಾಡಿದ್ದು" ಮೊದಲಾಗಿ ಅಜ್ಜಂದಿರ ಕಾಲದ ಕತೆ ಹೇಳಿ ತನ್ನ ಸ್ವಾರ್ಜಿತದ ಸೊಬಗನ್ನು ಬಣ್ಣಿಸುವುದೆಂದರೆ ಜೋಡಿದಾರರಿಗೆ

ಬಹು ಹುರುಪು, ಹುಮ್ಮಸ್ಸು. ಇತ್ತ ಜೋಡಿದಾರರ ಹೆಂಡತಿ ಸುಭದ್ರಮ್ಮ ನವರಿಗೂ ನೆರೆಯಲ್ಲೇ ಪಂಚಾತಿಕೆಗೆ ಇರುವು ಸಿಕ್ಕ ಹಾಗೂ ಆಯಿತು. ಹೊರತಾಗಿ, ಯಶವಂತರಾಯರ ಈಗಿನ ಹೆಂಡತಿ ತಾರಾಬಾಯಿಯವರಿಗೆ ಮಾತು ಎಣಿಸಿದಷ್ಟು ಬಿಗು; ಮಾತಿನ ಮಲ್ಲೆ ಬೇರೆ. ಇಬ್ಬರೂ ಕೂಡಿಕೊಂಡ ರೆಂದರೆ ಊರಿಗೆ ಊರೇ ಎಲೆಅಡಿಕೆಯ ಕಂಚಿಯಲ್ಲಿ ಸೇರುವುದು. ವೀಳ್ಯ ಮುಗಿಯುವಾಗ ಎಲ್ಲ ಮಾಯವಾಗುವುದು!

ವಾಸಂತಿಗೂ ಕಿವಿಗೊಡುವುದರಲ್ಲಿ ಇಷ್ಟ. ಕೇಳಿ ಕೇಳಿ ತನ್ನ ಮಾತನ್ನೂ ಒಂದಿಷ್ಟು ಎಡೆಯಲ್ಲಿ ತುರುಕಿಸುವುದಕ್ಕೆ ಕಲಿತಳು. ಆಕೆಯೂ ಹೆಣ್ಣಲ್ಲವೇ? ಸುಡುಮಣ್ಣಿಗಾಗದ ಮಾತು ಕಡೆಗೆ ನಮ್ಮ ಹೆಣ್ಣು ಮಕ್ಕಳ ಮುಂದೆಂದು ಮತ್ಯಾಕೆ ಹೇಳುತ್ತಾರೆ ಜನ? ಏನಿಲ್ಲದಿದ್ದರೂ, ಮಾದನೊಂದಿಗೆ ಮಾದಿಹೋದ ಳೆಂದಾದರೂ ಮಾತನಾಡಬೇಕು. ಇಲ್ಲವೆ "ಮಾದ ಮಾದಿಯ ಇಂದಿನ ಗಂಡ; ತುಂಬಾ ತಂದು ಕೊಡುತ್ತಾನೆ, ಚೆನ್ನಾಗಿ ನೋಡುತ್ತಾನೆ"—ಎಂದಾ ದರೂ ಕರಬುಗೊಳ್ಳದಿದ್ದರೆ ಕುಲೀನತೆಗೆ ಎಲ್ಲಿ ಸನ್ಮಾನವಿದೆ?

ಆ ಮಾತು ಈ ಮಾತು ಬರುವಾಗ ರಾಮು ಬಂದ ಸುದ್ದಿಯೂ ಎಡೆಯಲ್ಲಿ ನುಸುಳಿಗೊಂಡಿತು. ಅಷ್ಟೆ ಸಾಕು. ರಜಾ ಕಾಲ, ರಾಮು ಹೇಗೆ ಇದ್ದಾನೆಂದು ನೋಡಿಯಾಯಿತು. ಆತನು ಕಲಾವಿದನೆಂದು ತಿಳಿದಾಯಿತು. ಆತನಿಗೆ ಸಂಗೀತ ಬರುತ್ತದೆಂದೂ ಗೊತ್ತಾಯಿತು. ಅದರೊಂದಿಗೆ ತನಗೂ ಸಂಗೀತ ಗೊತ್ತಿದೆ ಎಂಬ ವಿಚಾರ ಆತನಿಗೂ ತಿಳಿಯಬೇಡವೇ? ರಾಮುವನ್ನು ನೋಡಿದಂದಿನಿಂದ ವಾಸಂತಿಯ ಸಂಗೀತ ಶ್ರುತಿ ತುಸು ವಿಪರೀತ ಕಾಳಜಿಗೆ ಬಂತು. ಯಾರಿಗೆ ಬೇಸರಾಗಲಿ, ಇಲ್ಲದಿರಲಿ ಆಕೆ ಪಿಟೀಲು ಹಿಡಿದು ಬಿಲ್ಲನ್ನು ಹೊಸೆಯ ತೊಡಗಿದಳು; ಹಗಲು ಒಳಹೊರಗೂ ಬಾಜಿಸುವಳು. ಮಂಜುಳ ಧ್ವನಿಯು ಆಕೆಯ ಕಂಠದಲ್ಲಿ ಎರೆದು ಹೋಗಿತ್ತು. ಆ ಧ್ವನಿಯಲ್ಲಿ ಜೀವವಾ ಗಿರುವ ನಾದಸ್ವರವು ಕಂಡಿ ಬಾಗಿಲುಗಳಿಂದ ಹಾದು ವಿಶಾಲವಾದ ವಾತಾವರಣ ದಲ್ಲೆಲ್ಲ ತರಂಗವನ್ನು ತೆರೆದು ನಾಲ್ಕೂ ದಿಕ್ಕಿಗೆ ತನ್ನ ವಿಜಯ ವಿಭ್ರಮದ ಕೇಳಿಯನ್ನು ಕೇಳಿಸುತ್ತಿತ್ತು. ತಾರಾಬಾಯಿಯವರು ಆಕೆಯನ್ನು ಮೆಚ್ಚಿದ್ದರು. ಆಕೆಯ ಕಂಠವನ್ನು ಎದೆಯಾರ ಹೊಗಳಿ 'ಕೋಗಿಲೆಯ ಕಂಠ ಎಳೆಯ ದಾಗಿದೆ, ಕೋಮಲವಾಗಿದೆ, ಮನೋಹಾರಿಯಾಗಿದೆ' ಎಂದಿದ್ದರು. ವಾಸಂತಿ ಹಿರಿಹಿಗ್ಗಿ ಹಾಡುತ್ತಿದ್ದಳು.

ರಾಮು ಚಿತ್ರ ಬರೆಯುವಾಗ ಬಳಸಿದ್ದ ಆತನ ಉಗ್ರತಪಸ್ಸಿನ ಭಾವ ಸಮಾಧಿಯೂ ಈ ಹೊತ್ತಿಗೆ ಭಂಗವಾಗುತ್ತಿತ್ತು. ಕೈಯಲ್ಲಿ ಲೀಲಾಜಾಲವಾಗಿ ಓಡುವ ಕುಂಚವೂ ಜಡವಾಗುತ್ತಿತ್ತು. ಆಗ ಆತನ ಸ್ಥಿತಿಯನ್ನು ನೋಡಿದವರು ಯೋಚಿಸಬಹುದು: "ಇವನು ಬರೆವ ಚಿತ್ರಗಳು ಕೈಯಿಂದ ಸಾಗಿದ ಕೈವಾಡವಲ್ಲ. ಕುಂಚಗಳನ್ನು ಹಿಡಿವ ಕೈಬೆರಳುಗಳು ಆತನ ಭಾವನೆಯ ಕೈಕೋಲುಗಳು ಅಷ್ಟೆ" ಅವು ನಡೆವುದು ಆತನ ಹೃದಯದ ಪ್ರೇರಣೆಯಿಂದ. ಅದೇ ಹೃದಯವು ನೆರೆಮನೆಯ ಸಂಗೀತನಾದಕ್ಕೆ ಮಾರುಹೋದರೆ, ಕುಂಚಗಳು ಜಾರಿ ಬೀಳುತ್ತಿದ್ದವು. ಒಂದೆರಡು ಚಿತ್ರಗಳು ಹೀಗೆ ಕೈಚೆಲ್ಲಿದುದರಿಂದ ಅನಿವಾರ್ಯವಾಗಿಯೇ ಕೈಗೂಡದೆ ಹೋದವು. ಆತನ ತಪಸ್ಸು ಯಜ್ಞಗಳು ಉಪ್ಪುನೀರಿನಲ್ಲಿ ಮುಳುಗಿದ್ದಾವು.

ನಿಜಕ್ಕೂ ಅದೊಂದು ರಸನಿಮಿಷ. ಅವನ ಮುಖದಲ್ಲಿ ಕಿರುನಗೆ ಮೂಡುವುದನ್ನು ನೀವು ನೋಡುವಿರಿ— ರಾಮು ಪ್ರಾಯಶಃ ಚೆಲ್ವ ರೂಪೊಂದನ್ನು ಸೃಷ್ಟಿಸಿಯೋ, ಇಲ್ಲವೆ ನೆನಹಿಗಾಸರೆಯಾಗಿಯೋ ಪೂಜಿಸುವನೋ! ಆದರೆ ಆ ಕನಸನ್ನೇಕೋ ಬಣ್ಣಕ್ಕೆ ಇಳಿಸಲು ಅವನಿಂದ ಸಾಧ್ಯವಾಗದೆ ಹೋಯಿತು! . . . . .

ಕಲೆಗಾರಿಕೆಯೂ ಒಂದು ತರ ಯೋಗ, ಒಂದು ತಪಸ್ಸು. ಆದರೆ ಮನವು ನೇರಿಡದಿದ್ದರೆ ಕಲೆಯು ಏಡಿಸದಿದ್ದೀತೆ? ಆತನ ತಪಶ್ಚರ್ಯ ಹೊಲಬು ತಪ್ಪಿ ಚೆಲುವನ್ನು ಆರಾಧಿಸಲು ಹಿಡಿಯಿತು. ಅದೇ ಧ್ಯಾನ! ಅದೇ ತಪಸ್ಸಾಯಿತು. ಇಷ್ಟುಕಾಲದ ಯೋಗಸಿದ್ಧಿಯಿಂದ ಕೈಹಿಡಿದ ರುಚಿಧರ್ಮ ಕೈಬಿಟ್ಟ ಹಾಗೇ—ಅವನು ಸಿಪ್ಪೆಯಾಗೇ ಹೋದ. ಉತ್ಸಾಹವಿಲ್ಲ, ಪ್ರೋತ್ಸಾಹವಿಲ್ಲ, ರಾಮು ಸುಮ್ಮನಿರುತಿದ್ದ. ಯಶವಂತರಾಯರು, ಹೆಂಡತಿಯ ಮಾತು ಕೇಳಿ, ಆಗಾಗ, "ಯಾಕೋ ರಾಮು, ಮನೆಯಲ್ಲಿ ಬಿದ್ದುಕೊಂಡರೆ ಅನ್ನ ಬರುತ್ತೇನು? ಎಲ್ಲಿಯಾದರೂ ನೋಡಬಾರದೇ?" ಎಂದು ಎಚ್ಚರಗೊಡ ಹತ್ತಿದರು. ರಾಮು ನೊಂದುಕೊಂಡು ಒಂದು ದಿನ ಮುಂಜಾವಿನಲ್ಲೆದ್ದು ಮಂಗಳೂರಿಗೆ ಪಯಣ ಬೆಳೆಸಿದನು. ಯಶವಂತರಾಯರೂ ಕೊನೆಗೆ ಮಗನನ್ನು ಹುಡುಕಿಕೊಂಡು ಅವನ ಹಿಂದೇ ನಡೆದರು. ತಾರಾಬಾಯಿ ಊರು ಕೇರಿ ಒಂದುಮಾಡಿದಳು. ಗಂಡನನ್ನು ಇದ್ದವರೆದುರೆಲ್ಲ ಹಂಗಿಸಿದಳು.

ಅದೇ ದಿನ ವಾಸಂತಿಯ ಹುಟ್ಟುಹಬ್ಬ. ಶೃಂಗಾರ ಸಂಭ್ರಮದಲ್ಲಿ

ತೇಲಾಡಿಕೊಂಡಿದ್ದಳು. ಅಂದು ಹಾಡಿದ ಆಕೆಯ ಸವಿಗನಸಿನ ಹಾಡುಗಳಿಗೆ ಏನು ಎಣೆಯಿತ್ತು? ಆದರೆ ರಾಮು ಊರಲ್ಲಿರಲಿಲ್ಲ ಎಂದಾಗ ಆಕೆಯ ಕೊರಳ ಬಾಣಿಗೆ ನಾದವೇ ಇಲ್ಲದೆ ಹೋಯಿತು; ದನಿ ಹಿಂಗಿ ಹೋಯಿತು; ಉಲ್ಲಸದ ಉತ್ಸಾಹ ಕುಗ್ಗಿತು, ನಿಜ. ಕಾಣುವ ಕಣ್ಣಿಲ್ಲ, ಕೇಳುವ ಕಿವಿಯಿಲ್ಲ; ಭಾವಿಸಿ ಬಗೆಯುವ ಒಲವಿನೆದೆಯಿಲ್ಲ. ಆಕೆ ಸಹಾನುಭೂತಿಯಿಲ್ಲದ ಮತ್ಯಾರಿಗಾಗಿ ನಲಿಯಬೇಕು? ಹೊತ್ತಿಳಿವ ಹಾಗೆ ಆಕೆ ಭೂಮಿಗಿಳಿದು ಹೋಗಿದ್ದಳು. ಈ ಅವಸ್ಥೆಯನ್ನು ನೋಡಿದ ಸುಭದ್ರಮ್ಮನವರು ಹರಕೆ ಹೇಳಿಕೊಂಡರು: "ಹುಡುಗಿ ಹುಷಾರಾದರೆ ನಿನಗೆ ಪೂಜೆಯೊಪ್ಪಿಸುತ್ತೇನೆ, ಮಲ್ಲಿಕಾರ್ಜುನಾ!"

ಮರುದಿನ ರಾಮು ಬಂದನು. ಯಶವಂತರಾಯರೂ ಬಂದರು. ಒಂದೆರಡುದಿನ ಸುದ್ದಿಯಿಲ್ಲ. ರಾಮು ಎಂದಿನಂತೆ ಹೂತೋಟದಲ್ಲಿ ಕುಳಿತು ಕೊಂಡು ಚಿತ್ರ ಬಿಡಿಸುತ್ತಿದ್ದ; ಯಶವಂತರಾಯರು ಹೂ ಗಿಡಗಳಿಗೆ ನೀರೆರೆಯು ತ್ತಿದ್ದರು. ಅವರಿಗೆ ಸಹಾಯಕಳಾಗಿ ಜಯಾ ಆಚೀಚೆ ಓಡ್ಯಾಡಿ ತನ್ನ ದೊಡ್ಡ ಕ್ಕನಿಗೆ ಕಾಲಿಯಾದ ನೀರಿನ ಡಬ್ಬಿಯನ್ನು ಒಯ್ದು ಕೊಡುತ್ತಿದ್ದಳು.

ವಾಸಂತಿ ದಿನ ನೋಡಿದಳು. ರಾಮು ಮತ್ತು ಜಯಾ ಇವರಿಬ್ಬರೇ ಇದ್ದರು ತೋಟದಲ್ಲಿ. ಆಕೆಯದು ಮುಗ್ಧ ಹೃದಯ. ಮಾತಿಲ್ಲ, ಕತೆಯಿಲ್ಲ; ಎಷ್ಟುದಿನ ಹೀಗೆ ಕಂಡರಿಯದ ಎದೆಗಾಗಿ ಹಂಬಲಿಸುತ್ತಿರಬಹುದು? ನೆಟ್ಟಗೆ ತೋಟದ ಸನಿಹಕ್ಕೆ ಬಂದಳು. ಒಬ್ಬರು ಇನ್ನೊಬ್ಬರನ್ನು ಚೆನ್ನಾಗಿ ನೋಡಿ ದಣಿದರು. ಯಾರೂ ಉಸಿರೆತ್ತಲಿಲ್ಲ. ಜಯಾ ಅಣ್ಣನಿಗೆ ಹೇಳಿದಳು: "ನೋಡು ಅಲ್ಲಿ-ವಾಸಂತಕ್ಕ. ನಿಮಗೆ ಗುರುತ, ಇದೇನು?" ರಾಮು ಏನೆನ್ನ ಬೇಕು? ನಗೆಯಾಡಿದನಷ್ಟೆ." ಜಯಾ ಅಷ್ಟರಲ್ಲೇ ಬಿಡಲಿಲ್ಲ.

"ವಸಂತಕ್ಕಾ, ಅಣ್ಣ ಚಂದ ಚಂದ ಚಿತ್ತರ ಮಾಡಿದ್ದಾರೆ!" ಆಕೆಯ ಎಳೆನಗುವಿನ ಚೆಲ್ಲ ನಿಷ್ಣಾತ ಚಿತ್ರಗಾರನೊಬ್ಬನನ್ನು ಮೂಕಾಗಿ ನಿಲ್ಲಿಸ ಬಹುದು. ವಾಸಂತಿ ತನ್ನ ಎದೆಯ ಸಂದೇಶವನ್ನು ಭಾವರೂಪಗಳಿಂದ ತಿಳಿಸಿದಳು. ಲಜ್ಜೆಯಿಂದಾಗಿ ಅದು ಮರಗುಗೊಂಡಿತು. ರಾಮು ಅದನ್ನು ಹೇಗೆ ತಿಳಿಯದಿದ್ದಾನು? ಆತನೇ ಆಮಂತ್ರಣವಿತ್ತನು: "ನೀವು ಚಿತ್ರಗಳನ್ನು ನೋಡ ಬಯಸುತ್ತೀರಾ?" ಆಕೆಗೆ ಬೇಕಾದುದೂ ಅಷ್ಟೆ.

ಮೂವರೂ ತೋಟದಿಂದ ಉಪ್ಪರಿಗೆಯನ್ನೇರಿದರು. ವಾಸಂತಿ ಅರುಹಿ ದಳು: "ಚಿತ್ರಗಳನ್ನು ಒಟ್ಟುಮಾಡುವದೆಂದರೆ ನನಗೆ ಪ್ರಾಣ. ಒಳ್ಳೆಯ ಚಿತ್ರಗಳು ನನ್ನ ಪ್ರೀತಿಯ ವಸ್ತುಗಳು."

"ಚೆಲುವಿನ ಎಲ್ಲ ವಸ್ತುಗಳೂ ಆನಂದದಾಯಕವೇ!" ರಾಮು ತನ್ನ ಮಾತಿನ ಸರಗೂಡಿದನು.

ಒಂದೊಂದೇ ಚಿತ್ರ ಹೊರಬಂತು. ಹಿಂದೀ ರಾಷ್ಟ್ರೀಯ ಧುರೀಣರ ಭಾವಚಿತ್ರಗಳನ್ನು ನೋಡಿದುದಾಯಿತು. ಮತ್ತೆ ತನ್ನ ಒಂದಿಗೆ ಚಿತ್ರಕಲೆ ಯನ್ನು ಅಭ್ಯಸಿಸಿದವರ ಮುಖಚಿತ್ರಗಳನ್ನು ತೋರಿಸಿದನು. ಅವನ ಗುರುಗಳು ಶ್ರೀ ಉಮಾಶಂಕರರಾಯರ ಚಿತ್ರವನ್ನು ಹಿಂದೆ ತೋರಿಸುತ್ತೇನೆಂದನು. ಅಷ್ಟರಲ್ಲಿ ವಾಸಂತಿ ಚೆಲುವೆಯೊಬ್ಬಳ ಭಾವಚಿತ್ರವನ್ನು ಎತ್ತಿಕೊಂಡಳು. ಆ ಸಂಚಯದಲ್ಲಿ ಇದ್ದ ಒಂದೇ ಒಂದು ಹೆಣ್ಣಿನ ಚಿತ್ರ ಅದು. ಅದರ ಕೆಳಗೆ "ಬಸಂತಿ" ಎಂದು ಬರೆದಿತ್ತು. ವಾಸಂತಿ ಕೇಳಿದಳು: "ಇದು ನಿಮಗೆ ಹೇಗೆ ಬಂತು?"

"ನನ್ನ ಕಲಾ ಗುರುಗಳು ಈಗ ಮುಂಬಯಿಯಲ್ಲಿದ್ದಾರೆ. ಈ ಚಿತ್ರವನ್ನು ಬರೆದುಕೊಡಬೇಕೆಂದು ನನಗೆ ಒಪ್ಪಿಸಿದರು. ಇದು ಪೂರ್ಣ ಆಗಲಿಲ್ಲ. ಇನ್ನು ಬೇಗನೆ ಮುಗಿಸಿ ಕಳಿಸುತ್ತೇನೆ."

"ಇದರ ಬೇರೆ ಪ್ರತಿ ಇದೆಯೇನು ತಮ್ಮ ಹತ್ತಿರ?"

"ಇಲ್ಲ ಅವರು ತಗೊಂಡಿದ್ದಾರೆ"

"ಅವರ ಹೆಸರೇನೆಂದು ಹೇಳಿದಿರಿ?"

"ಉಮಾಶಂಕರರಾಯರು."

"ಆಃ!"

"ಈ ಚಿತ್ರದ ಹಿಂಗತೆ ಬಹು ಸ್ವಾರಸ್ಯವಾಗಿದೆ—"

ವಾಸಂತಿ ಬೆವತು ಹೋದಳು. ಮೂಕಾಗಿ ಶಿಲಾ ಬಾಲಿಕೆಯಂತೆ ನಿಂತುಕೊಂಡಳು ಅಷ್ಟೆ. ರಾಮು ಈಕೆಯ ಈ ತರಹ ನಡವಳಿಕೆಯನ್ನು ಏನೆಂದೂ ಅರಿಯಲಾರದಾದನು. ಅವನು ಹೇಳಿದ: "ಒಳ್ಳೆಯ ಗುಣದವರು. ಸರಲಸ್ವಭಾವದವರು. ಈ ಚಿತ್ರದ ಹಿಂದೆ ಬಹಳ ಕತೆ ನಡೆದಿದೆ. ಹುಡುಗಿ ಯೊಬ್ಬಳ ಛಾಯಾಚಿತ್ರ(Photograph)ವನ್ನು ತೋರಿಸಿ ಚೆಂದಗಿದ್ದಾಳೆಂದು ಹೇಳಿದರಂತೆ ಅವರಿಗೆ ಹುಡುಗಿ ಕೊಟ್ಟ ಮಾವ. ಆದರೆ ನಿಜವಾಗಿ ಆಕೆಯ ರೂಪಿನಲ್ಲಿ ಇದ್ದ ಕೊರತೆ ಆಕೆಯ ಫೋಟೋದಲ್ಲಿ ಬಂದಿರಲಿಲ್ಲ."

"ಯಾವ ಅಂಗ ಸೊಟ್ಟಾಗಿತ್ತು?" ವಾಸಂತಿ ಕುತೂಹಲದಿಂದ ಉಗುಳು ನಗುತ್ತ ಪ್ರಶ್ನಿಸಿದಳು. ರಾಮು ಹೇಳಿದ: ಗಲ್ಲ ಚಪ್ಪಟೆಯಾಗಿತ್ತೆಂದು ಅವರು

ಹೇಳಿದ ನೆನಪು" ವಾಸಂತಿ ತನ್ನ ಗಲ್ಲವನ್ನು ಸವರಿ ನೋಡಿಕೊಂಡಳು. ರಾಮು ಅದನ್ನು ನೋಡಿದರೂ, ಹುಡುಗೀತನದ ಚಪಲತೆ ಇರಬಹುದೆಂದು ಕೊಂಡನು. ಆದರೆ ಏನು ಸಂಶಯ ಬಂದರೂ ಅದರ ಆಧಾರದಿಂದ ಯಾವ ನಿರ್ಣಯ ಹೇಳಲು ಬಂದೀತು? ವಾಸಂತಿಯ ಕಣ್ಣುಗಳ ದಡವಿಾರಿ ಹರಿದ ಕಣ್ಣೀರಿನ ಚೆಂದ ಹನಿಗಳು "ಇದೇ ಆ ಚಪ್ಪಟೆಯಾದ ಗಲ್ಲ" ಎಂದು ತೋರಿಕೆ ಹೇಳುವಂತೆ ಹೊಳವು ಹಾಯ್ದವು.

ಅಹುದು ಅದು ವಾಸಂತಿಯ ಕತೆ; ರಾಮು ತಿಳಿದೂ ಗುರುತಿಸ ಲಾರದ ಕತೆ.

ವಾಸಂತಿ ಆಗ ೧೩ರ ಹುಡುಗಿ. ಅಷ್ಟರಲ್ಲಿಯೇ ಉಮಾಶಂಕರರಾಯ ರಿಗೆ ಕೊಟ್ಟು ಲಗ್ನವಾಯಿತು. ಉಮಾಶಂಕರರಾಯರು ನಿಷ್ಣಾತ ಚಿತ್ರಶಿಲ್ಪಿ; ಹೆಸರಾದ ಕಲಾವಿದರು; ಸೌಂದರ್ಯವನ್ನು ಆರಾಧಿಸುವ ಭಕ್ತರು. ವಾಸಂತಿ ಯನ್ನು ಲಗ್ನದ ಕಾಲದಲ್ಲಿ ಅಂತರಪಟ ತೆರೆದ ಒಂದೇ ಒಂದು ಗಳಿಗೆ ಮಾತ್ರ ಅಂಜುತ್ತಂಜುತ್ತ ನುದುಮಗನ ಲಜ್ಜೆಯಿಂದ ನೋಡಿದ್ದರು. ಅದೇ ಮೊದಲು ಅದೇ ಕೊನೆ, ಮತ್ತೆ ಆಕೆಯನ್ನು ಕಣ್ಣೆತ್ತಿ ನೋಡಿರಲಿಲ್ಲ. ಹುಡುಗಿಯ ತಂದೆ ವಂಚಿಸಿದರೆಂದು ನಿಷ್ಠುರದಿಂದ ವಾಸಂತಿಯನ್ನು ಆಕೆಯ ತಂದೆಯ ಮನೆಯಲ್ಲೇ ಬಿಟ್ಟುಹೋದರು. ಒಂದು ಪತ್ರವನ್ನಾದರೂ ಬರೆಯದೆ, ಬರೆದರೆ ಉತ್ತರವಿಲ್ಲದೆ ಇದ್ದರು. ಜೋಡಿದಾರರು ತನಗಾದ ಅವಮಾನ ಹೇಸಿಕೆಗಳನ್ನು "ಮಗಳ ಹಣೆಬರಹ"ದ ಮೇಲೆ ಹೊರಿಸಿದರು. ಅಹುದು, ಅವರಂದಂತೆ "ನಾವೇನು ಮಾಡಲಾದೀತು?"

ಆದರೆ ಕುಮಾರಿ ವಾಸಂತಿಗೆ ಆ ನೆನಹು ಅಷ್ಟಾಗಿ ಉಳಿದಿತ್ತು. ಜೋಡಿ ದಾರರು ಒಂದೊಂದು ಸಲ ಮಗಳಿಗೆ ಸಮಾಧಾನ ಹೇಳುತ್ತಿದ್ದರು: ಉಮಾ ಶಂಕರರಾಯರೆಂದು ಒಬ್ಬರಿದ್ದಾರೆ. ನಿನ್ನ ಲಗ್ನ ಮಾಡ್ಕೋತ್ತಾರೆ. ನೀನು ಅವರ ಹೆಸರು ಕರೆಯಬಾರದು." ಪಾಪ; ಎಂಥ ಹುಚ್ಚುತನ! ವಾಸಂತಿಗೆ ಈ ಮಾತುಗಳು ಯಾವ ಅರ್ಥವನ್ನು ಹುಟ್ಟಿಸುತಿದ್ದುವೋ! ಅಲ್ಲ-ಅವಳ ಎದೆಯಲ್ಲಿ ಎಂಥ ಝಂಝಾವಾತವನ್ನು ಎಬ್ಬಿಸುತ್ತಿತ್ತೋ!

ರಾಮು ವಾಸಂತಿಯ ಗಲ್ಲವನ್ನು ತೊಯ್ಸ್ಲಳಿವ, ಕಂಬನಿಯ ಕೋಡಿಯನ್ನು ನೋಡಿದನು. ಅವನಿಗೆ ಒಮ್ಮೆ ಧಸಕ್ಕೆಂದಿತು ಎದೆಯಲ್ಲಿ. ಅವನೆಂದ:"ಉಮಾ ಶಂಕರರಾಯರೆಂದರೆ ನಿಮಗೆ ಗೊತ್ತು ಇದೆ ಅಂತ ಕಾಣುತ್ತದೆ. ಅಲ್ಲವೇ?"

"ಉಹೂಂ-ಂ-ಂ!" ಎನ್ನುತ್ತ ಎಳೆನಗೆಯನ್ನು ನೋವಿನ ಆಳವನ್ನು ದಾಟಿಸಿ ಕರೆಯುತ್ತಿದ್ದಳು. ಕಣ್ಣುಗಳನ್ನು ಒಡನೆ ಒರಸಿಕೊಂಡಳು.

"ಇವರೇ ನೋಡಿರಿ, ಉಮಾಶಂಕರರಾಯರು." ಎನ್ನುತ್ತ ರಾಮು ಅವರ ಚಿತ್ರವನ್ನು ತೋರಿಸಿದನು. ವಾಸಂತಿ ಅದನ್ನು .ನೋಡುನೋಡುತ್ತ ವಿಲಕ್ಷಣಳಾದಳು. ಕಂಬನಿಯ ಕಟ್ಟು ತಿರಿಗಿ ಒಡೆಯಿತು.

"ಅಳುತ್ತೀರೇಕೆ?" ಎಂದು ರಾಮು ವಿವಂಚನೆಯಿಂದ ಕೇಳಿದನು. "ದಮ್ಮಯ್ಯ. ಏನಿಲ್ಲ!" ಎಂದು ವಾಸಂತಿ ಸೆರಗಿಂದ ಮೋರೆಯನ್ನು ಮುಚ್ಚಿಕೊಂಡಳು. ಆದರೆ ರಾಮು ಆಗ್ರಹ ಮಾಡಿದ ಮೇಲೆ ಬಿಕ್ಕಳಿಸುತ್ತ ವಾಸಂತಿ ಹೇಳಿದಳು: "ನಾನೇ ವಾಸಂತಿ" ಆಕೆ ಗಳಗಳನೆ ಅತ್ತಳು.

ರಾಮು ಚಿತ್ರವನ್ನೂ ವಾಸಂತಿಯ ಚೆಲ್ವ ಮೋರೆಯನ್ನೂ ಸೂಕ್ಷ್ಮವಾಗಿ ನೋಡತೊಡಗಿದನು. ಅವನಿಗೆ ಯೋಚನೆ ಬಂತು: "ಉಮಾಶಂಕರರಾಯರು ವಾಸಂತಿಯನ್ನು ಈಗ ನೋಡಿದರೆ? ಅವರು ಮೊದಲು ನೋಡಿದ ಊನ ಇಂದಿಲ್ಲ; ಹರಯದ ಬಣ್ಣದಲ್ಲಿ ಕರಗಿಹೋಗಿದೆ; ಜವ್ವನದ ಸೊಬಗಿನಲ್ಲಿ ಮರೆತು ಹೋಗಿದೆ." ರಾಮು ಇನ್ನೂ ಸ್ವಲ್ಪ ಧೀರನಾದನು: "ಉಮಾಶಂಕರ ರಾಯರು ಇನ್ನು ಬೇಟೆಗೆ ಹೋಗುವ ಅಗತ್ಯವಿಲ್ಲ!"

ರಾಮು ಮತ್ತೆ ವಾಸಂತಿಯನ್ನು ಸೋದರಿಯಂತೆ ನೋಡಿದ. "ನಿಮ್ಮ ಚಿತ್ರವನ್ನು ನನ್ನ ಗುರುಗಳಿಗೆ ಕಳಿಸಿಕೊಡುತ್ತೇನೆ." ಆಕೆ ಸಿಟ್ಟಿನಿಂದ ಉಗಿದು ನುಡಿದಳು: "ಬೇಡ, ನಾನು ತೀರಿಕೊಂಡೆನೆಂದು ಅವರಿಗೆ ಬರೆದು ಬಿಡಿ."

"ಏಕೆ? ಅವರು ನಿಮ್ಮನ್ನು ಬೇಡಾ ಅನ್ನಲಿಲ್ಲ. ತಾನೆ? ಬೇರೆ ಲಗ್ನವನ್ನೂ ಮಾಡಿಕೊಂಡಿಲ್ಲ. ಇವತ್ತು ನಿಮ್ಮ ರೂಪು ತುಂಬಿನಿಂತಿದೆ. ಕವಿಯಾದರೆ ಬಣ್ಣಿಸುವ ಬಗೆಯಿರುವ ಮುಖ . . . . . ನೀವು ಹಾಗೇಕೆ ಯೋಚಿಸಬೇಕು? ಅವರು ಖಂಡಿತ ಸ್ವೀಕರಿಸುತ್ತಾರೆ . . . . ."

"ದಮ್ಮಯ್ಯ ಹಾಗೆ ಮಾಡಬೇಡಿ." ವಾಸಂತಿ ಬೇಡಿಕೊಂಡಳು. ಆಕೆಯ ಕಣ್ಣುಗಳ ಹೊಳವು ರಾಮೂನ ಎದೆಯನ್ನು ನಾಟದಿರಲಿಲ್ಲ . . . . .

* * * *

ರಾಮು ಮುಂಬಯಿಗೆ ಹೋದನು, ಒಂದಿಗೆ ವಾಸಂತಿಯ ಭಾವಚಿತ್ರವನ್ನು ಒಯ್ದಿದ್ದನು. ವಾಸಂತಿಗೆ ಈ ಏರ್ಪಾಡು ಸರಿಬೀಳಲಿಲ್ಲ. ಆಕೆ ನೊಂದುಕೊಂಡಳು. ನಿತ್ಯ ರಾಮೂನ ಧ್ಯಾನ ಮಾಡುತ್ತಿದ್ದಳು. ಆದರೆ . . .

ಜೋಡಿದಾರರು ತೋಟದಲ್ಲಿದ್ದರು. ಅಂಚೆಯವನು ಒಂದು ತಂತಿಯನ್ನು ತಂದುಕೊಟ್ಟನು. ತಂದೆಯ ಕರುಳು ಹಿಗ್ಗಿತು. ಕುಮಾರಿಯ ಭಾಗ್ಯ .ತೆರೆದಿತೆಂದುಕೊಂಡು ಕುಣಿಯುತ್ತಲೇ ಒಳಗೋಡಿದರು. ಒಂದೇ ಉಸಿರಲ್ಲಿ ಸುಭದ್ರಮ್ಮನವರಿಗೆ ಸುದ್ದಿ ಮುಟ್ಟಿಸಿದರು; "ಉಮಾಶಂಕರ ಬರುತ್ತಾನಂತೆ!" ಪಾಪ ತಂದೆಯ ಕರುಳಲ್ಲವೇ? ಹಾಗೇ ತಾಯಿಯೂ ನಲಿದಾಡಿದಳು. ಹೆತ್ತ ಕರುಳಿಗೆ ಇದ್ದ ಒಲವನ್ನು ತೋರಿದಳು. ಅದು ಸಂಕಟವನ್ನು ಬಣ್ಣಿಸಿಯೂ ಆಯಿತು.

ಉಮಾಶಂಕರರಾಯರು ಬಂದಾಗ ರೇಲವೇಸ್ಟೇಷನ್ನಿನಲ್ಲಿ ಎದುರುಗೊಳ್ಳಲು ಹೋದರು. ಅತ್ಯಾದರದಿಂದ ಮನೆಗೆ ಬಂದರು. ರಾಮು ಕೂಡಾ ಬಂದಿದ್ದ.

ಊಟ ಉಪಚಾರಗಳಾದವು. ಆದರೆ ವಾಸಂತಿಯು ಅವರಿದಿರು ಸುಳಿಯಿಲೆ ಇಲ್ಲ. ರಾಮು ಮತ್ತೆ ಮನೆಗೆ ಹೊರಟಾಗ ಮನೆಗೆ ಹಿಂಭಾಗವಾಗಿ ಬಂದು ಹೊನ್ನೇಮರದ ಅಡಿಯಲ್ಲಿ ಆತನನ್ನು ಜೋತುಬಿದ್ದು ಅತ್ತಳು. ರಾಮು ಸಂತವಿಸಿದನು: "ಅಮ್ಮ ನೀವು ಗುರು ಪತ್ನಿಯವರು ಮಾತೃ ಸಮಾನರು . . . ."

ವಾಸಂತಿ ಮಾತನಾಡಲಿಲ್ಲ; ಉನ್ಮಾದಿನಿಯಂತೆ ಆಕೆ ಇನ್ನೊಂದು ಗಳಿಗೆ ಅಲ್ಲಿ ನಿಲ್ಲದೆ ಮನೆಯೊಳಗೆ ಓಡಿಹೋದಳು.

ಈಗ ರಾಮೂಗೆ ಹುಟ್ಟಿನಾಡಿನ ಕುರಿತು ಮೊದಲಿದ್ದ ಭಾವನೆಯಿಲ್ಲ; ಅದು ಬದಲಾಗಿದೆ. ಭಾವನೆಯ ವಿಸ್ತಾರ ಕಾಸರಗೋಡಿನ ಒಂದೆಕರೆ ಬಯಲಲ್ಲಿ ಅಡಗಿ ನಿಂತಿದೆ! ಬದುಕಿನ ಹಾಡಿನಲ್ಲಿ ಅದನ್ನು ಹೊಸೆಯುತ್ತಾನೆ.



# ನಾಗರಿಕ ಹೆಣ್ಣು

ಇರುಳು ಹೊತ್ತಾಗಿಲ್ಲ, ಮರುಳು ಹಾಯ್ದಿರಲಿಕ್ಕಿಲ್ಲ; ಕತ್ತಲೆಯ ನೆರೆಯೇನೋ ಸಂಜೆಯ ದಡ ಮೀರಿ ಹರಿದಿತ್ತು.

ತಮ್ಮು ಹಳ್ಳಿಯಿಂದ ಬರುತ್ತಿದ್ದನು. ಕೈಯಲ್ಲಿ ಬ್ಯಾಟರಿ ಲೈಟಿದ್ದಿತು; ರಜೆಯಲ್ಲಿ ಓದಲು, ಬರೆಯಲು ಎಂದು ಒಂದಿಗೆ ಒಯ್ದಿದ್ದ ಹೊತ್ತಿಗೆಗಳ ಕೈಚೀಲವೊಂದು ಇದ್ದಿತು. ಬೇರೇನೂ ಇರಲಿಲ್ಲ.

ದಾರಿ ನಡೆವಾಗ ತಲೆತುಂಬ ಹೊಸ ಬಗೆಗಳು ತಮ್ಮುವಿನ ಮನದ ಪಟದ ಮೇಲೆ ಬಣ್ಣವಾಡುತ್ತಿದ್ದವು; ಹೊಸ ಆಸೆಯ ಕದಿರು ಕಳೆಗೂಡುತ್ತಿದ್ದಿತು. ತಮ್ಮು ಸುಮಾರು ಹತ್ತು ಮೈಲು ದೂರದ ತನ್ನ ಹಳ್ಳಿಯಿಂದ ಒಬ್ಬನೇ ನಡೆತಂದಿದ್ದನು; ತನಗೆ ತಾನೇ, ಮನದೊಳಗೇ ಏನೇನನ್ನೋ ಬಗೆದು ಬೆದರುತ್ತ ಒಣ್ಣಿಸುತ್ತ, ಒಳಗೊಳಗೇ ನಗುತ್ತ ದಾರಿ ನಡೆದಿದ್ದನು. ಇನ್ನು ಪೇಟೆಗೆ ಒಂದು ಅರೆಮೈಲಿನ ದಾರಿ ಉಳಿದಿತ್ತು.

ಬೀದಿಯ ಪಕ್ಕದಿಂದ ಯಾರೋ, ಹೆಣ್ಣೊಬ್ಬಳು ಅಡ್ಡಬಂದಳು.

ತಮ್ಮು ನಿಂತನು, ಅವಳೂ ನಿಂತಳು; ಆತನ ಕೈಯಲ್ಲಿಯ ಬ್ಯಾಟರಿಯ ನೆರವನ್ನು, ಏಕೋ, ಅವನು ಕೊಳ್ಳದಾದನು; ಅವನು ಅಂಜಿದನು.

ಕತ್ತಲೆಯಲ್ಲಿ ನಡೆವುದೆಂದರೆ ಅವನಿಗೆ ಮರುಳಿನ ಭೀತಿಯಿಲ್ಲ; ಗುಳಿಗನ ಭಯವಿಲ್ಲ. ಆದರೂ ತಮ್ಮು ಬೆಚ್ಚಿ, ಬೆವತು ನಿಂತನು. ಇದೇನು ಯಕ್ಷಿಯೋ ಮಾಸ್ತಿಯೋ ಎಂದು ಅವನಿಗೆ ಸಂದೇಹವಾಯಿತು. ಇನ್ನೇನು, ಈಕೆ ಸುಣ್ಣ ಕೇಳುವಳೋ, ಮಾಟ ಮಾಡುವಳೋ ಏನೆಂದು ತಮ್ಮು ಒಮ್ಮೆ ನಡುಗಿದನು.

ತುಸು ಹೊತ್ತು ಯಾರೂ ಮಾತನಾಡಲಿಲ್ಲ. ಸೂಜಿ ಬಿದ್ದ ಸದ್ದನ್ನಾದರೂ ಕೇಳಿಸದಂತೆ ಬಿಗಿಹಿಡಿದ ತಣ್ಣನ ಗಾಳಿ ಬೀಸಿತು. ದಾರಿಯ ಪಕ್ಕದಲ್ಲಿದ್ದ ಸಾಲುಮರಗಳ ಎಲೆಗಳು ಅಲ್ಲಾಡಿದುವು. ತಮ್ಮುವಿನ ಮಾತು ಕದಲಲಿಲ್ಲ. ಕೊನೆಗೆ ಆ ಹೆಣ್ಣೇ ಅಂದಳು: "ಎಲ್ಲಿಂದ ಬರೋಣವಾಯಿತು ರಾಯರ ಸವಾರಿ?"

ತಮ್ಮು ತುಸ ಸಾವರಿಸಿಕೊಂಡು ಅಂದನು: "ಹತ್ತಿರದ ಒಂದು ಸಣ್ಣ ಹಳ್ಳಿ ನನ್ನ ಊರು. ಪೇಟೆಗೆ ಹೋಗುತ್ತಿದ್ದೇನೆ.... ನೀನು.... ಯಾರು?"

"ನಾನು ಒಬ್ಬ ಹೆಂಗಸು. ಹೆಚ್ಚಿಗೆ ಹೇಳಲಾರೆ....ನಿಮಗೆ ಮದುವೆ ಯಾಗಿದೆಯೇನು? ಎಳೆವಯಸ್ಸಿನವರಂತೆ ತೋರುತ್ತದೆ....!"

ಆ ಹೆಣ್ಣಿನ ಕಣ್ಣು ಕತ್ತಲೆಯಲ್ಲಿಯೂ ಕಾಣುವನಿತು ಚೂಪಾಗಿದ್ದಿರ ಬೇಕು; ತಮ್ಮು ಒಬ್ಬ ಹೆಣ್ಣಿನ ಛಾಯೆ ಕಂಡನೇ ಹೊರತು, ಆಕೆಯ ವಯಸ್ಸ ನ್ನಾಗಲಿ, ರೂಪವನ್ನಾಗಲಿ ಗುರುತಿಸುವಂತಿರಲಿಲ್ಲ. ಕೈಯಲ್ಲಿದ್ದ ಲೈಟನ್ನು ಬೆಳಗಲು ಅವನ ಎದೆ ಹಿಮ್ಮೆಟ್ಟುತ್ತಿತ್ತು, ಕೈ ಕುಂದಿತ್ತು. ಯಾವುದೋ ಒಂದು ಮಾಯೆಗೆ ಸಿಕ್ಕು ತತ್ತರಿಸುವಂತೆ ಅವನ ಪಾಡಾಗಿತ್ತು. ಆ ಹೆಣ್ಣು ಕೇಳಿದ್ದಕ್ಕೆಲ್ಲ, ಅಡಿಮೆಯಾಳಿನಂತೆ ಮಾರ್ನುಡಿಯುತ್ತಿದ್ದನು. ಈ ಬಾರಿ ಅವನು ಸುಮ್ಮನಿದ್ದನು; ಆಕೆ ಕೇಳಿದ ಮಾತು ತೀರ ಹೊಸತೆನಿಸಿತು: ಯಾರೋ ಹೆಣ್ಣು ಮಗಳೊಬ್ಬಳು ದಾರಿಯಲ್ಲಿ ಹೋಗುತ್ತಿರುವ ಗಂಡಸರನ್ನು ತಡೆದು, ಕೇಳುತ್ತಾಳೆ–"ನಿಮಗೆ ಮದುವೆಯಾಗಿದೆಯೇನು?" ತಮ್ಮು ಏನೆನ್ನು ವುದೆಂದು ಅರಿಯದೆಯೇ ಹೌದೆಂದನು.

"ಮಕ್ಕಳೂ ಇರಬಹುದು. ಹೆಂಡತಿಯನ್ನು ಹಳ್ಳಿಯಲ್ಲೇ ಬಿಟ್ಟು ಬಂದಿದ್ದೀರಾ?"

"ಹೌದು—"

"ನಿಮಗೆ ಏನು ಕಸಬು?"

"ನಾನು ತಾಲ್ಲೂಕಿನಲ್ಲಿ ಗುಮಾಸ್ತನಾಗಿದ್ದೇನೆ."

"ಇಲ್ಲಿ ಸಂಸಾರವನ್ನು ತಾರದೆ ಹೇಗೆ ಇರುತ್ತೀರಪ್ಪಾ!....ನಿಮಗೆ 'ಆಸೆ' ಆಗುವುದಿಲ್ಲವೇ?...."

"ಏತರ ಆಸೆ?"

"ಹೆಂಡತಿ ತಮ್ಮ ಬಳಿಯಲ್ಲಿ ಇರಬೇಕೆಂಬ ಬಯಕೆ?"

ತಮ್ಮು ಈಗ ತನ್ನ ನೆಲೆಗೆ ಬಂದನು. "ಇದನ್ನೆಲ್ಲ ತಿಳಕೊಂಡು ನಿನಗಾಗ ಬೇಕಾದದ್ದೇನಮ್ಮ? ಹೆಣ್ಣಾದವಳು ನೀನು; ಹೀಗೆ ಕತ್ತಲೆಯಲ್ಲಿ ದಾರಿಹೋಕ ರನ್ನು ತಡೆದು ನಿಲ್ಲಿಸಿ ಹೀಗೆ ಮಾತಾಡಿಸುವುದೇ ನಿನ್ನ ಕಸಬೇನು?....ಅಲ್ಲ.... ನಿನ್ನ ತಲೆ ಕೆಟ್ಟಿರಬೇಕು...." ಅವನು ರೇಗಿದನು.

"ಅಲ್ಲ. ಅದಕ್ಕಿಂತಲೂ ಹೆಚ್ಚಿನದಿದೆ–"ಎಂದು ಅವಳು ನಕ್ಕಳು; "ನಾನು ಇವೊತ್ತು ನಿಮ್ಮನ್ನು ಮುಂದೆ ಸಾಗಲು ಬಿಡುವುದಿಲ್ಲ. ನಮ್ಮ ಮನೆ ಇಲ್ಲೇ ಇದೆ; ಅಲ್ಲಿ ಈ ಇರುಳು ತಂಗಿರಬೇಕು....ನಾಳೆ ಬೆಳಗಾತ ಹೋಗಬಹುದು."

ತಮ್ಮ ತಬ್ಬಿಬ್ಬಾದನು. ಇದೇನು ಮಾಟವೋ, ಕಾಟವೋ ಎಂದು ಅಂಜಿ ಅರಕೆಯಾದನು. ಆದರೆ ಅವನಿಗೆ ಶ್ರೀ ಮಲ್ಲಿಕಾರ್ಜುನದೇವರ ನೆನಪಾಯಿತು. ಎದೆಯೊಳಗೇ ದೇವರನ್ನು ನೆನೆದುಕೊಂಡು ಗಟ್ಟಿ ಮನಸು ಮಾಡಿ ಒಂದು ಹೆಜ್ಜೆ ಮುಂದಿಟ್ಟನು. ಆ ಹೆಣ್ಣು ಅಡ್ಡ ನಿಂತಳು: "ನೀವು ಎಲ್ಲಿಗೆ ಹೋಗುತ್ತೀರಿ ನೋಡುತ್ತೇನೆ."

"ಅದೇನು ನೀನು ಹಾದರ—"

"ಹೌದು, ನಾನು ಹಾದರ ಮಾಡುವ ಬಿಡುಸೂಳೆ!" ಎಂದು ನಾಚಿಗೆಯಿಲ್ಲದೆ, ಆ ಹೆಣ್ಣುಮಗಳು ಒಪ್ಪಿದಳು.

"ನಾನು ಆ ಜಾತಿಗೆ ಸೇರಿಲ್ಲ. ನನಗೆ ಹೆಣ್ಣಿನ ಬಳಿಗೆ ಹೋಗುವ ಆಸೆ ಇಲ್ಲ. ಈಗ ದಾರಿ ಬಿಡುತ್ತೀಯೋ ಇಲ್ಲವೋ?" ತಮ್ಮ ಗದ್ದರಿಸಿದನು.

"ಓಹೋ! ನೀವೊಬ್ಬ ರಾಮ ಹಾಗಾದರೆ?"

"ರಾಮನೋ ಭೀಮನೋ; ನೀನಾರು ಹಾಗಾದರೆ?"

"ರಾಮಾಯಣವನ್ನು ನೀವೂ ಓದಿರಬೇಕು. ಯಾರೆಂದು ತಿಳಿದಿಲ್ಲವೇ?"

"ನಾನು ತಿಳಿಯಬೇಕಾಗಿಲ್ಲ. ರಾಮ ನಾನಾದರೆ ನೀನು ಶೂರ್ಪನಖಿಯಾಗಿರಬೇಕು—ನನಗಿಂತ ಹೆಚ್ಚು ನೀನು ಓದಬೇಕು ಆ ಕತೆಯನ್ನು, ಮೊದಲಿನಿಂದ ಕೊನೆಯವರೆಗೆ ಓದಿ ಪಾಟಮಾಡಬೇಕು. ಆಗ ನಿನ್ನ ಪಾಡೇನೆಂದು ತಿಳಿದೀತು....!"

"ನನ್ನ ಪಾಡೇನು? ಬಿದಿ ಅದನ್ನು ಮೊದಲೇ ಬರೆದಿಟ್ಟಿದಾನೆ. ಇನ್ನು ಅದನ್ನು ಕತೆಯೋದಿ ತಿದ್ದುವಂತಿಲ್ಲ. ನನ್ನ ಕಸುಬಿದು, ನಿಮ್ಮನ್ನು ಕೊಳ್ಳೆಗೊಳ್ಳುವೆ ಇವೊತ್ತು. ನಿಮ್ಮ ಕಡೆಯಿಂದ ಇನ್ನು ಹುಟ್ಟಿಸಿದ ದೈವವೇ ಬಂದರೂ ಅತ್ತ ಹೋಗಲು ಬಿಡಲಾರೆ ಒಳ್ಳೆಯ ಮಾತಿನಲ್ಲಿ ಬನ್ನಿ—"

ಅವಳು ತಮ್ಮನ ಕೈರಟ್ಟೆಯನ್ನು ಹಿಡಿಯಲು ಹೋದಳು. ತಮ್ಮ ಕೊಡವಿಕೊಂಡನು. ಅವನು ಹುಚ್ಚನಂತೆ, "ನೀನು ಸುಮ್ಮನೆ ನನ್ನನ್ನು ಕೆಡಿಸಲು ಬರಬೇಡ...."ಎಂದು ಅಳುವ, ಹಿಂಗಿದ ದನಿಯಲ್ಲಿ ಅಂದನು.

ನೀವು ಹಾಳಾಗುವುದು ಹೇಗೆ? ಗಂಡಸರು ನೂರು ಹೆಂಗಸರ ಜತೆಗೂ ಕೂಡಿಯಾಡಬಹುದು. ಹೆಣ್ಣಾದರೆ ಒಬ್ಬ ಗಂಡನೆಂಬವನಿಂದಲೇ ಪಾರಾಗಬೇಕು. ನಾನು ಮದುವೆಯಾದವಳಲ್ಲ, ಮಾರುಹೋದವಳು. ಕಂಡ ಗಂಡಸರೊಂದಿಗೆ ನಾನು ಬೆರೆಯುತ್ತೇನೆ...."

"ನೀನು ನನಗೆ ತಂಗಿ, ಇಲ್ಲವೆ ತಾಯಾಗುವೆ...."

"ಸೋದರಿಯಾಗಲಿ, ತಾಯಾಗಲಿ ಹೆಣ್ಣಲ್ಲವೇ? ನಿಮ್ಮ ಮಡದಿ ಮತ್ತೆ ಹೆಣ್ಣಲ್ಲವೇ........?"

"ನನಗೆ ಮೋರೆಯಲ್ಲಿ ಕಣ್ಣುಂಟು, ತಲೆಯಲ್ಲಿ ಮೆದುಳುಂಟು. ನಾನು ಅಮಲುಕೋರನೂ ಅಲ್ಲ; ಬಯಕೆಯ ಒತ್ತಾಟವೂ ಇಲ್ಲ. ನನ್ನ ಹೊಟ್ಟೆಯ ಪಾಡಿಗಾಗಿ ಮನೆಬಿಟ್ಟು ದೂರದ ಈ ಊರಲ್ಲಿ ಬಂದು ದುಡಿಯುತ್ತಿದ್ದೇನೆ. ನಿನ್ನಂತಹ ಹೆಣ್ಣಿನ ಕೂಡೆ ನನಗೆ ಮಾತೇ ಸಲ್ಲದು. ನೀನು ಇವೊತ್ತಿನ ಮಟ್ಟಿಗೆ ಬೇರೆ ಯಾರಾದರೂ ಸಿಕ್ಕುತ್ತಾರೋ ನೋಡು. ನನ್ನನ್ನು ಬಿಟ್ಟು ಬಿಡು ತಾಯಿ........"

ಆ ದಾರಿಯಲ್ಲಿ ಒಂದು ಎತ್ತಿನಗಾಡಿ ಬರುತ್ತಿದ್ದಿತು. ತಮ್ಮು ತುಸ ಎದೆಗೊಂಡನು; ಆದರೆ, ಅವನಂತಹ ಪುಕ್ಕರು ಬೇರೆ ಯಾರಾದರೂ ಇದ್ದಾರೆಯೋ ಅನಿಸುವುದು. "ಇತ್ತ. ಸರಿಯಿರಿ-" ಎಂದು ಹೇಳುತ್ತ ಆ ಹೆಣ್ಣು ಅವನ ಕೈಯನ್ನು ಹಿಡಿದು ಎಳೆದುಕೊಂಡು ದಾರಿಯ ಪಕ್ಕಕ್ಕಿದ್ದ ಸಾಲುಮರಗಳ ಮರೆಗೆ ಒಯ್ದಳು. ಆತನಿಗೆ ಮಾತನಾಡಲು ಉಸಿರೇ ಇರಲಿಲ್ಲವೇನೋ!

ಆ ಹೆಣ್ಣು ಅಂದಳು: "ಹೇಳಿ, ನಾನು ತಮ್ಮ ಸೋದರಿಯೆಂದು ತಿಳಿಯಿರಿ. ಇಂದು ನಾನೂ ಒಬ್ಬ ಸೋದರನನ್ನು ಕಂಡೆನು. ನಿಮ್ಮ ಸೋದರಿಯೊಬ್ಬಳು ಇಂತಹ ಪಾಡಿಗೆ ಬಿದ್ದರೆ ನೀವು ಆಕೆಯನ್ನು ತಮ್ಮ ಸೋದರಿಯೆಂದು ಒಪ್ಪಲಾರಿರಾ? ಇಲ್ಲವೆ, ಆಕೆ ಕರೆದರೆ, ಬರಲಾರೆನೆಂದು ಓಡಿಹೋಗುವಿರಾ? ಇದೇ ನಿಮ್ಮ ತಾಯಿ, ತಂಗಿ?"

ತಮ್ಮು ಮಾತನಾಡಲಿಲ್ಲ.

"ನಿಮಗೆ ಸೋದರಿಯರಿಲ್ಲವೇ?"

ಇದ್ದರೂ, ಈಗ ತಮ್ಮು ಇಲ್ಲ ಎನ್ನುವಂತಿದ್ದನು.

"ನಾನಿದ್ದೇನೆಂದು ತಿಳಿಯಿರಿ. ಬನ್ನಿ ನನ್ನ ಬಾಳಿನ ಕತೆಯನ್ನು ಇಂದು ನಿಮ್ಮ ಮುಂದೆ ತೋಡಿಕೊಂಡು ನನ್ನ ಹಲವು ದಿನಗಳಿಂದ ಪೆಡಸಾದ ಮನವನ್ನು ಹಗುರಗೊಳಿಸುತ್ತೇನೆ."

ಇದಾಗುವಾಗ, ತಮ್ಮು ತನ್ನ ಬ್ಯಾಟರಿ ಲೈಟನ್ನು ಬೆಳಗಿ ಆಕೆಯ ಮೋರೆಗೆ ಹಿಡಿದನು. ಗುರುತು ಇದ್ದ ಮೊಗ. "ನಿನ್ನ ಹೆಸರೇನು ತಂಗೀ? ನನಗೆ ಮರೆತುಹೋಗಿದೆ—"ಎಂದು ಅವನೊಂದು ಬಿಡುಗಡೆಯ ತಳಕ್ಕೆ

ಬಂದಂತೆ ನಿಟ್ಟುಸಿರುಗರೆದನು. ಅವನ ಹೋದ ಜೀವ ತಿರುಗಿ ಬಂದಿತ್ತು.

ಅವಳು ಆತನ ಮೋರೆಯನ್ನು ಗುರುತಿಸಿದಳು. "ತಮ್ಮಣ್ಣನೇನು? ಅಯ್ಯೋ ಪಾಪವೇ, ಚೆನ್ನಮ್ಮನ ಹೆಸರು ಈಗ ಯಾರಿಗೆ ನೆನಪು!...." ಎಂದು ಅವಳು ತಲೆ ಬಾಗಿದಳು.

ತಮ್ಮು ಅಚ್ಚರಿಯಿಂದ ಕೇಳಿದನು: "ಹೀಗೆಲ್ಲ ಆಗಬೇಕಾದದ್ದಿದ್ದಿತೇನು ಚೆನ್ನಮ್ಮಾ? ನಾನು ಅಂದು ನಿನಗೆ ಒಳ್ಳೆಯ ನಾಲ್ಕು ಮಾತುಗಳನ್ನು ಹೇಳಿದೆ. ನೀನು ಅದಕ್ಕೇ ನನ್ನನ್ನು ಹಂಗಿಸಿ, ಶಾಲೆಯ ಉಳಿದ ಹೆಣ್ಣುಮಕ್ಕಳಿಂದಲೂ ಗೇಲಿಮಾಡಿಸಿದೆ. ನಾನು 'ಪ್ರಿ ಹಿಸ್ಟೋರಿಕ್' ಕಾಲದ ಜಂತು ಎಂದು ನಿಮಗೆಲ್ಲರಿಗೂ ಆಗ ಕಂಡಿತ್ತು. ನಿಮ್ಮ ಕಾಲದ ಹಿಸ್ಟರಿಯೇ ಹಿಸ್ಟರಿ! ಹಿಸ್ಟೀರಿಯಾ!...."

ನನ್ನ ಮೇಲೆ ನಿಮಗೆ ಅಂದು ಅನಿತೊಂದು ಅಕ್ಕರೆ ಇದ್ದುದಾದರೆ ನನ್ನ ಕಿರುಗುಡಿಸಲಿಗೆ ಬನ್ನಿ. ಅಲ್ಲಿ ನನ್ನ ಕತೆಯನ್ನೆಲ್ಲ ಹೇಳುತ್ತೇನೆ....ಬನ್ನಿ—"

ತಮ್ಮು ಚೆನ್ನಮ್ಮನ ಗುಡಿಸಲು ಹೊಕ್ಕನು. ಆಕೆ ಒಡನೆ ಒಂದು ಲಾಂದರು ಉರಿಸಿ, ತಮ್ಮುವಿಗೆ ಕುಳ್ಳಿರಲು ಒಂದು ಮಣೆಯನ್ನು ತಂದು ಕೊಟ್ಟಳು. ಅವನಿಗೆ ತಿನ್ನಲು ಹಣ್ಣುಗಳನ್ನೂ, ಕುಡಿಯಲು ಹಾಲನ್ನೂ ಕೊಟ್ಟಳು.

ತಮ್ಮು ತುಸ ದಣುವಾರಿಸಿಕೊಂಡನು.

೨

ಚೆನ್ನಮ್ಮ ತನ್ನ ಕತೆಯನ್ನು ಹೇಳತೊಡಗಿದಳು—"ನನ್ನ ತಂದೆ ನೀವು ಈಗ ಕಸಬು ಹಿಡಿದಿರುವ ಕಚೇರಿಯಲ್ಲಿಯೇ ಗುಮಾಸ್ತೆಯಾಗಿದ್ದರು. ಬರೇ ಸಣ್ಣ ಸಂಬಳ. ಊಟ ಬಟ್ಟೆಗೂ ಸಾಕಾಗುತ್ತಿರಲಿಲ್ಲ. ತಾಯಿ ಆಗಾಗ ಕಾಹಿಲೆಯಲ್ಲಿ ಮಲಗುತ್ತಿದ್ದಳು. ಅವಳನ್ನು ಜೋಕೆ ಮಾಡುವುದಕ್ಕಾಗಿಯೇ ತಂದೆಯ ಕೈಯಲ್ಲಿ ಇದ್ದ ಪುಡಿಕಾಸುಗಳೆಲ್ಲ ವೆಚ್ಚವಾಯಿತು, ಸಾಲವೂ ಆಯಿತು. ಇದರ ಜೊತೆಗೆ ಯಾವ ನಾಡೋ, ಸೀಮೆಯವರೋ ತಂತಮ್ಮೊಳಗೆ ಕಾದಾಡಿಕೊಂಡರು, ಅವರ ಜೊತೆಗೆ ನಮ್ಮ ನಾಡವರೂ ಕಾಲು ಕೆರೆದರು. ಅಂತೂ ಕಾಡಿನಲ್ಲಿದ್ದ ಬೂತ ಮನೆಗೆ ಬಂತು. ಬರಗಾಲ ಬಂತು. ಅನ್ನ ಬಟ್ಟೆಯ ಬೆಲೆ ಒಂದಕ್ಕೆ ನೂರಾಯಿತು. ಇದರಿಂದ ನಾವು ಬದುಕುವುದೇ ಮೋಸವೆಂಬಲ್ಲಿಗೆ ಬಂತು. ನಾನು ನಡುವೆ ಸಾಲೆ ಬಿಡಬೇಕಾಗಿ ಬಂತು........"

"ಆದರೆ ನೀನು ಶಾಲೆ ಬಿಡುವಾಗ ನಿನ್ನ....ಅವರು ಬೇಡ ಎನ್ನಲಿಲ್ಲವೇ?

ಚೆನ್ನಮ್ಮ ತಲೆ ಬಾಗಿದಳು. ಹಿಂದೆ ಆಕೆಯನ್ನು ಹೀಗೇ ಒಮ್ಮೆ ತಲೆ ಬಾಗಿದುದನ್ನು ತಮ್ಮು ಕಂಡಿದ್ದನು. ಆಗ ಆಕೆ ಜವ್ವನದ ಹಮ್ಮಿನಲ್ಲಿದ್ದಳು. ತಮ್ಮು ಕೆಡಬೇಡ ಎಂದಾಗ ಸೆಡವಿಂದ ಬಾಗಿದ ಆ ಸೇಲೆ ಇಂದಿರಲಿಲ್ಲ. ಈಗ ಅವಳ ಬಾಡಿದ ಮೋರೆಯಲ್ಲಿ ಹೆಣ್ಣಿನ ಕಳೆಯೇ ತೋರಲಿಲ್ಲ.

ಚೆನ್ನಮ್ಮ ಮೆಲ್ಲನೆ ಅಂದಳು: "ನಿಮಗೆ ನಾನು ನಡೆದೆಲ್ಲ ಕತೆಯನ್ನು ಹೇಳುತ್ತೇನೆ, ಹಾಗಾದರೆ—"

"ಸರಿ, ಮೊದಲಿಂದ ಹೇಳು."

"ನೀವು ನಮ್ಮ ನಮ್ಮ ಸಾಲೆಗೆ ಬರುವ ಹಿಂದಿನ ವರುಸದಲ್ಲಿ ನನ್ನ ಬಾಳಿನಲ್ಲಿ ಬೆರಗೆನಿಸುವ ಆಗು ಒಂದುಂಟು. ತಿರುಮಲ ಎಂಬೊಬ್ಬ ಹುಡುಗ ನನ್ನ ತರಗತಿಯಲ್ಲಿ ಓದುತ್ತಿದ್ದ. ಅವನ ಜೊತೆಗೆ ನಿಮ್ಮ ಗೆಳೆಯ ಯೋಗೀಂದ್ರನೂ ಇದ್ದ, ಇಬ್ಬರೂ ಮೊದಲೀಂದಲೇ ತುಂಟರು. ಕ್ಲಾಸಿನೊಳಗೆ ಹುಡುಗಿಯರು ಬಂದರೆಂದರೆ ಸರಿ, ಬೊಬ್ಬೆಯೇ ಬೊಬ್ಬೆ. ಒಬ್ಬಳ ಡೆಸ್ಕಿನೊಳಗೆ ಬಿಸಿಲು ಹಾವಿನ ಮರಿ, ಇನ್ನೊಬ್ಬಳ ಡೆಸ್ಕಿನೊಳಗೆ ಕಪ್ಪೆಮರಿ; ಮೂರನೆಯವಳ ಡೆಸ್ಕಿನೊಳಗೆ ಇನ್ನೇನಾದರೂ ಕಸಕಡ್ಡಿಗಳು— ಅವು ಇಂತದ್ದೇ ಇದ್ದೀತೆಂಬ ನೇಮವಿಲ್ಲ. ಇದರಲ್ಲಿ ತಿರುಮಲನದೇ ಮೇಲುಗೈ. ನಾವು ಇವನ್ನು ಕಂಡು ಬೆಚ್ಚಿ ಹಾರಿಬೀಳುತ್ತಿದ್ದೆವು. ಆಗ ಹುಡುಗರಿಗೆ ನಗಲು ದಾರಿಯಾಗುತ್ತಿತ್ತು. ಇಂತು ಇವರಿಬ್ಬರೂ ಕೂಡಿ ಹುಡುಗಿಯರನ್ನು ಹಂಗಿಸಿ ಕೊಳ್ಳುತ್ತಿದ್ದರು.

"ತಿರುಮಲ ನನ್ನನ್ನು ಮೆಚ್ಚಿದನೆಂದು ತೋರುತ್ತದೆ. ಅವನು ದಿನವೂ ನನ್ನ ಬೆನ್ನುಹತ್ತಲು ತೊಡಗಿದನು. ಸಾಲೆಯ ಒಳಗೆ ನಕಲಿ ಮಾಡಿದ ಹಾಗೆ ಬೀದಿಯಲ್ಲೂ ಹಂಗಿಸುವನೇನೋ ಎಂದು ನನಗೆ ಯಾವಾಗಲೂ ಅಂಜಿಕೆಯಾಗುತ್ತಿತ್ತು. ಸಾಲೆಯಿಂದ ಹಿಡಿದು ನಮ್ಮ ಮನೆಯಬಾಗಿಲಿನ ವರೆಗೂ ನಾಯಿಯಂತೆ ಬರುತ್ತಿದ್ದ. ನಾನು ಬೇಗಬೇಗನೇ ನಡೆದುಹೋಗಿ ಮನೆ ಬಾಗಿಲಲ್ಲಿ ನಿಂತು ಒಮ್ಮೆ ಹಿಂತಿರುಗಿ ನೋಡುತ್ತಿದ್ದೆ. ಅವನ ಬಾಡಿದ ಮೋರೆಯನ್ನು ನೋಡಿನೋಡಿ ನನಗೇ ಕಳವಳವುಂಟಾಗಿತ್ತು. ಅವನು ಮತ್ತೆ ನನಗೆ ಕಾಗದ ಬರೆಯತೊಡಗಿದ. ಅವುಗಳನ್ನು ಹಾವಿನಮರಿ, ಕಪ್ಪೆಯಮರಿಗಳ ಬದಲಿಗೆ ಡೆಸ್ಕಿನಲ್ಲಿ ಮಡಗಿಡುತ್ತಿದ್ದನು. ನಾನು ಮರುವೋಲೆ ಕೊಡುವುದಂತಿರಲಿ, ಅವನ ಕಡೆಗೆ ಹೊರಳಿಕೂಡ ನೋಡುವುದಿಲ್ಲವೆಂದು ಗಟ್ಟಿಮಾಡಿದ್ದೆ.

"ನನ್ನ ಕಡೆಯಿಂದ ಅವನಿಗೆ ಯಾವೊಂದು ಮಾತಾದರೂ ಸಲ್ಲದೆ ಇದ್ದುದರಿಂದ ಅವನಿಗೆ ತುಂಬ ಬೇಸರವಾಗಿದ್ದಿರಬೇಕು. ಒಂದು ದಿನ ಅವನು ಸಾಲೆ ಬಿಟ್ಟೊಡನೆ, ನಾನು ಮನೆಗೆ ಹೋಗುವಾಗ ನನ್ನ ಬೆನ್ನಹಿಂದೆಯೇ ಓಡಿಕೊಂಡು ಬಂದು—"ಚೆನ್ನಮ್ಮ, ಇದಕ್ಕೆ ನೀನು ಖಂಡಿತ ಒಪ್ಪಿಗೆ ಕೊಡಬೇಕು." ಎಂದು ಒಂದು ಕವರನ್ನು ನನ್ನ ಕೈಗೆ ದಾಟಿಸಲು ಹವಣಿಸಿದನು.

ಇದೆಲ್ಲ ಏನು ಕತೆ ಇರಬೇಕೆಂದು ಅವನ ಗೆಳೆಯ ಯೋಗೀಂದ್ರನಿಗೆ ಗೊತ್ತಿತ್ತು. ತಿರುಮಲ ಅವನಿಗೆ ತನ್ನೆಲ್ಲ ಗುಟ್ಟನ್ನೂ ಹೇಳಿದ್ದನು. ಈ ಹೊತ್ತನ್ನು ಕಾದುಕೊಂಡು ಯೋಗೀಂದ್ರ ಹೊಂಚುಹಾಕಿಕೊಂಡಿದ್ದ. ಅವನು ತನ್ನೊಂದಿಗೆ ಕೆಲವಾರು ಪೋಲಿ ಹುಡುಗರನ್ನು ಕೂಡಿಕೊಂಡು ತಿರುಮಲನ ಬೆನ್ನುಹಿಡಿದು ಬಂದನು. ನನ್ನನ್ನು ಮಾತನಾಡಿಸುವ ಹುರುಪಿನಿಂದ ಬರುತ್ತಿದ್ದ ತಿರುಮಲನಿಗೆ ಇವರ ಸಂಚು ಹೊಳೆಯಲಿಲ್ಲ. ನನ್ನ ಕೈಗೆ ಕಾಗದವನ್ನು ದಾಟಿಸಬೇಕೆಂದಿರುವಾಗಲೇ ಹಿಂದಿನಿಂದ ಯೋಗೀಂದ್ರನೂ ಅವನ ಗೆಳೆಯರೂ ಡೊಂಬರ ಹುಡುಗರಂತೆ ಚೀರಾಟ, ಹಾರಾಟಮಾಡಿದರು. ನಾವಿಬ್ಬರೂ ಕಳ್ಳರಂತೆ ದಂಗುಬಡೆದು ನಿಂತೆವು. ನನಗಾದ ನಾಚಿಕೆಗೆ ಮೇರೆಯಿಲ್ಲ. ಸಿಟ್ಟು ಕೆರಳಿ ಹೋಯಿತು. ನನ್ನ ತಲೆಯಲ್ಲಿ ಆಗ ಏನು ಸುಳಿಯಿತೋ ಹೇಳಲು ಬರುವುದಿಲ್ಲ. ತಟ್ಟನೆ ನಾನು ತಿರುಮಲನ ಕೈಯಲ್ಲಿದ್ದ ಕವರನ್ನು ಇಸುಕೊಂಡು, ಎಲ್ಲರೆದುರಿನಲ್ಲಿಯೇ ಅದನ್ನು ಬೀದಿಗೆ ಎಸೆದು, ಚೆನ್ನಾಗಿ ತುಳಿದು ಮುಂದಡಿಯಿಟ್ಟೆ. ಹುಡುಗರೆಲ್ಲ ಬೊಬ್ಬಿಟ್ಟರು—"ಹೋಗಿ ಸತ್ತುಬಿಡೋ, ನಿನ್ನ ಎದೆಗೇ ಮೆಟ್ಟಿದಳಲ್ಲೋ, ತಿರುಮಲ!....ಹೋಗಿ ಕೆರೆ ಭಾವಿ ಮುಗುಚುತ್ತೀಯೋ, ಅಲ್ಲ ನಿನ್ನ ಸುಟ್ಟ ಮೋರೆಯನ್ನು ಮುಂದಿಗೆ ಕಾಣಿಸ್ತೀಯೋ?...." ಎಂದು ಕಂಡಾಬಟ್ಟೆ ಬಾಯಿಮಾಡಿದರು. ನನಗಿವು ಬಹುದೂರದ ವರೆಗೆ ಕೇಳಿಸುತ್ತಿತ್ತು. ಆ ದಿನ ನಡೆದ ಈ ಗದ್ದಲ, ಗಲಾಟೆಯನ್ನು ನೆನೆವಾಗ ನನಗಿಂದು ದುಃಖವಾಗುವುದು ಆ ಬಡಪಾಯಿ, ಮಾರನೆಯ ದಿನ ಬೆಳಗಾಗಬೇಕಾದರೆ, ಈ ಇಳೆಯ ಕಳೆಯನ್ನೆಲ್ಲ ನಮಗೆ ಬಿಟ್ಟು ಕಣ್ಮುಚ್ಚಿದನು. ಅವನ ತಂದೆಗೆ ಅವನೊಬ್ಬನೇ ಸಂತತಿ. ಆ ತಂದೆತಾಯಂದಿರು ಉಂಡ ಎದೆನೋವು ಬೇಸರಿಕೆಗಳನ್ನು ಇಂದು ನಾನು ಉಣ್ಣುತ್ತಿದ್ದೇನೆ.... ...

ನಿಮ್ಮ ಗೆಳೆಯ ಯೋಗೀಂದ್ರ ಅವನ ಸಾವಿಗೆ ಕಾರಣನಾಗಿರಬಹುದು; ನಾನೂ ಇರಬಹುದು. ಅಂದು ಅವರು ಹಾಗೆ ಹಂಗಿಸಬಾರದಿತ್ತು; ಅವನು

ಒಲುಮೆಯಿಂದ ಬರೆದ ಎದೆಮಾತಿನ ಕಾಗದವನ್ನು ನಾನು ಹಾಗೆ ಹತ್ತು ಮಂದಿಯ ಮುಂದೆ ಕಾಲಿಂದ ತುಳಿದು ಹಮ್ಮು ತೋರಬಾರದಿತ್ತು—ಎಂದು ನನಗೆ ಇಂದು ಅನಿಸುತ್ತದೆ. ಅಂದಿನ ಈ ಪ್ರಸಂಗ ನಡೆಯದೆ ಇರುತ್ತಿದ್ದರೆ ನನ್ನ ಬಾಳು ಈ ಪಾರಿ ಹಿಡಿಯುತ್ತಿರಲಿಲ್ಲ ಎಂದು ಈಗ ಅನಿಸುತ್ತದೆ. ಅವನು ಅದಕ್ಕೂ ಮೊದಲು ಬರೆದ ಎರಡು ಕಾಗದಗಳು ಇನ್ನೂ ನನ್ನ ಬಳಿ ಇವೆ—" ಎಂದು ಚೆನ್ನಮ್ಮ ಎದ್ದು ಒಳಗೆ ಹೋದಳು. ಬರುವಾಗ ಒಂದು ಕವರನ್ನು ತಂದಳು. ಅದನ್ನು ತಮ್ಮುವಿನ ಕೈಗೆ ಕೊಟ್ಟು, "ನೀವೇ ಓದಿ" ಎಂದಳು.

ತಮ್ಮು ಓದಿದ—

(ಓಲೆ ಒಂದು)

"ಚೆಲ್ವೆ ಚೆನ್ನಮ್ಮಗೆ—

ನಾನು ನಿನ್ನನ್ನು ಮೆಚ್ಚಿದ್ದೇನೆ. ನೀನು ಒಪ್ಪುವೆಯಾದರೆ ನನ್ನ ತಂದೆ ತಾಯಿಗಳಿಗೆ ತಿಳಿಸಿ ನಿನ್ನನ್ನು ಮದುವೆಯಾಗಲು ಇಚ್ಛಿಸುತ್ತೇನೆ.

ನೀನು ಯಾರ ಮಗಳು, ನಿನ್ನ ತಂದೆಗೆ ಏನು ಹುಟ್ಟುವಳಿ ಇದೆ, ನಿನ್ನ ಮದುವೆ ಸದ್ಯಕ್ಕೆ ಆಗುವುದಿದ್ದರೆ, ಇಲ್ಲವೆ ಆಗದೆ ಇರುವುದಕ್ಕೆ ಇರುವ ತೊಡಕುಗಳೇನೇನು ಇವೆ ಎಂಬುದನ್ನು ನಾನು ಅರಿತಿದ್ದೇನೆ. ನಾನು ತಿಳಿದಮಟ್ಟಿಗೆ ದುಡ್ಡಿನ ಅಡಚಣೆಯೇ ಅಡ್ಡನಿಂತುದಾದರೆ, ಅದನ್ನು ಕುರಿತು ಎಣಿಸುವುದೇ ಬೇಡ. ನಾನು ನನ್ನ ತಂದೆಗೆ, ನಿನ್ನಹಾಗೆ ಒಂದೇ ಸಂತತಿ. ಅವರಿಗೆ ತುಂಬ ಆಸ್ತಿಯುಂಟು; ತಾಯಿಯೂ ಸೊತ್ತು ಇದ್ದವಳೇ. ಇವಕ್ಕೆಲ್ಲ ನಾನೇ ವಾರಸುದಾರ. ನನ್ನ ಮದುವೆ ಬೇಗನೆ ಆಗಿಬಿಡಲಿ ಎಂದು ಹೆತ್ತವಳು ಅಲ್ಲಿ ಇಲ್ಲಿ ಹೆಣ್ಣು ಹುಡುಕುವುದರಲ್ಲಿದ್ದಾರೆ. ಅವರಿಗೆ ದುಡ್ಡಿದ್ದವರೇ ಆಗಬೇಕೆಂದಿಲ್ಲ. ನಾನು ಒಪ್ಪಿದ ಹೆಣ್ಣನ್ನು ಅವರು ಮನೆಗೆ ತಂದುಕೊಳ್ಳುವರು.

ಹೀಗಿರುವಾಗ, ನಿನ್ನ ಮನವೇನೆಂದು ನಾನು ತಿಳಿಯಲು ಕಾದು ಕುದಿಯುತ್ತಿದ್ದೇನೆ. ನೀನು ಇದನ್ನು ನಂಬುಗೆಯಿಂದ ಎತ್ತಿಕೊಂಡು, ನಿನ್ನ ಮನದೊಳಗೇನೆಂದು ಕವಡಿಲ್ಲದೆ ಹೇಳಬೇಕಾಗಿ ನನ್ನ ಒಲವಿನ ಅರಿಕೆ. ಒಪ್ಪಿದೆನೆನ್ನು, ಇಲ್ಲವೆ ಒಲ್ಲೆನೆನ್ನು; ಅದರಲ್ಲಿ ಬೇಸರವಿಲ್ಲ. ಹೀಗೆ ನಾನು ಬರೆದು ತಿಳಿಸಿದುದರಲ್ಲಿಯೂ ಬೇರೆ ಕವಡು, ಮೋಸವಿಲ್ಲ.

ಇಂತು,

ನಿನ್ನ ಒಲವಿಗೆ ಆಸೆಗೊಂಡ,

ತಿರುಮಲ."

(ಓಲೆ ಎರಡು)

"ಚೆಲ್ವೆ ಚೆನ್ನಮ್ಮಗೆ—

ನನ್ನ ಮೊದಲನೆಯ ಓಲೆಗೆ ನೀನು ಮರುವಡಿ ಈಯದಿದ್ದುದರಿಂದ ನನ್ನ ಮನಸಿಗೆ ತುಂಬ ಬೇಸರವಾಗಿದೆ. ನೀನು ಈ ಕುರಿತು ಅಂಜುವುದಕ್ಕಿಲ್ಲ, ಬೇಕಾದರೆ ನಿನ್ನ ತಂದೆಗೆ ಇದನ್ನೂ ಇದರ ಹಿಂದಿನ ಓಲೆಯನ್ನೂ ತೋರಿಸು. ಅವರ ಒಪ್ಪಿಗೆಯೂ ಬೇಕು. ನಿನ್ನ ಒಪ್ಪಿಗೆಯಂತೂ ಮೊದಲು. ಏತಕ್ಕೂ ಅಳುಕಬೇಡ, ಅಂಜಬೇಡ; ಮನವಿದ್ದರೆ ಹೇಳು, ಇಲ್ಲದಿದ್ದರೂ ಹೇಳು. ಬರಿದೇ ಈಯೊಂದು ಜೀವ ತತ್ತರಿಸಬೇಕೇನು? ನಿನ್ನ ಓಲೆ ಈಗ ಬಂದೀತು, ಇನ್ನೊಂದು ಗಳಿಗೆಯಲ್ಲಿ ಬಂದೀತು ಅನಿಸುತ್ತದೆ. ನಿನ್ನ ಮರುವಡಿಗಾಗಿ ದಿಕ್ಕು ನೋಡುತ್ತಿದ್ದೇನೆ. ನಿನ್ನನ್ನು ಅಂಗಲಾಚಿ ಬೇಡಿಕೊಳ್ಳುತ್ತೇನೆ, ಒಡನೆ ಬರೆ. ಆದರೆ ತಟ್ಟನೆ ಯಾವೊಂದು ತೀರ್ಪಿಗೂ ಬರಬೇಡ. ಚೆನ್ನಾಗಿ ಎಣಿಸಿ ನೋಡಿ ಬರೆ, ಏಕೆಂದರೆ ನಿನ್ನ ಮುಂದಿನ ಬಾಳುವೆಯೆಲ್ಲ ಈ ಒಂದು ಗಳಿಗೆಯ ಹುಚ್ಚು ತಲೆಯಿಂದ ಕೆಟ್ಟುಹೋಗಬಾರದು.

ಇಂತು,

ನಿನ್ನ ಒಲವಿಗೆ ಆಸೆಪಡುವ,

ತಿರುಮಲ."

ಚೆನ್ನಮ್ಮ ಪೊಟ್ಟೆರಂತೆ ಕುಳಿತು ತಮ್ಮುವಿನ ಮೋರೆಯನ್ನೇ ದಿಟ್ಟಿಸಿ ನೋಡುತ್ತಿದ್ದಳು. ಎರಡು ಓಲೆಗಳನ್ನೂ ಓದಿದ ಬಳಿಕ ತಮ್ಮು ಒಂದು ನಿಟ್ಟುಸಿರುಬಿಟ್ಟನು. ಅವನ ಬಾಯಿಂದ ಈ ಮಾತುಗಳು ಹೊರಟವು: "ನೀನು ತಿರುಮಲನನ್ನು ಒಪ್ಪಿಕೊಂಡಿದ್ದರೆ ಇಂದು ನೀನು ಈ ದಾರಿಗೆ ಬೀಳುತ್ತಿರಲಿಲ್ಲ!"

ಚೆನ್ನಮ್ಮ ಮಾತನಾಡಲಿಲ್ಲ; ನೆಟ್ಟಗಣ್ಣಿನಿಂದ ತಮ್ಮುವನ್ನೇ ನೋಡಿ ಕುಳಿತಿದ್ದಳು. ಅವನು ತಟ್ಟನೆ ಕೇಳಿದನು: "ಯೋಗೀಂದ್ರ ಇದನ್ನೆಲ್ಲ ಅರಿತಿದ್ದಿರಬೇಕು, ಅಲ್ಲವೆ?"

"ಹೌದು,"

"ನಾವು ಅಚ್ಚಿನ ಗೆಳೆಯರು. ನನ್ನೊಡನೆ ಈ ಕುರಿತು ಒಂದು ಮಾತನ್ನೂ ಆಡಿಲ್ಲ."

"ಅದು ಅವನು ಮಾಡಿದ ಮೋಸ. ನನ್ನದೂ ಅದರಲ್ಲಿ ಒಂದು ಕೈಯುಂಟು."

"ಏನು?"

"ಈ ಗುಟ್ಟನ್ನು ಅವನು ಯಾರಮುಂದೂ ತೆರೆಯದಂತೆ ನಾನು ತಾಕೀತು ಮಾಡಿದ್ದೆ. ನನ್ನ ಮನಸ್ಸು ಅವನನ್ನು ಒಪ್ಪಿತ್ತು; ಅವನಾದರೋ ನನ್ನನ್ನು ಪಡೆಯಲುಬೇಕಾಗಿ, ತಿರುಮಲನನ್ನು ಮೋಸಪಡಿಸಿದನು, ಅವನ ಸಾವಿಗೂ ಕಾರಣನಾದನು........"

"ಈ ನಡೆದುದೆಲ್ಲ ನಿನ್ನ ತಂದೆಗೂ ತಿಳಿಯಲಿಲ್ಲವೇ?"

"ಇಲ್ಲ. ಸಾಲೆಯಲ್ಲೂ, ತಿರುಮಲ ಓದಿ ಹುಚ್ಚಾದನು, ತನ್ನನ್ನು ತಾನೇ ಕೊಂದುಕೊಂಡನು ಎಂದೇ ಸುದ್ದಿಯಾಗಿತ್ತು. ಹುಡುಗರು ಅರಿತವರೆಲ್ಲ, ಯೋಗೀಂದ್ರನ ರಟ್ಟೆಗೆ ಹೆದರಿ ಬಾಯಿ ಮುಚ್ಚಿದ್ದರು...."

"ನೀನು ಅವನನ್ನು ಏನೆಂದು ಮೆಚ್ಚಿದೆ, ಚೆನ್ನಮ್ಮಾ? ಅವನೂ ತುಂಟನಲ್ಲವೇ?"

"ಅವನು ಕಟ್ಟಾಳು. ತಿರುಮಲನಂತೆ ಚುರುಕು ಇದ್ದ. ಅವನಂತೆ ಓದಿ ಮರುಳಾದ ಕೂಚುಭಟ್ಟ ಇವನಲ್ಲ ಎಂಬ ನಂಬುಗೆ ಸಾಕಾಗಿತ್ತು. ಇವನ ಮೈಕಟ್ಟುಗಳನ್ನು ಕಂಡರೆಯೇ ಮರುಳಾಗಬೇಕು. ತಿರುಮಲ ಚೆನ್ನಾಗಿ ಓದಿ, ಓದಿ ಕಣ್ಣುಗಳನ್ನು ಬಾಡಿಸಿಕೊಂಡಿದ್ದನು. ಯೋಗೀಂದ್ರನ ಕಣ್ಣುಗಳಲ್ಲಿ ಹೊಳೆಯುತ್ತಿದ್ದ ಮೈಸಿರಿಯನ್ನು ನೀವೇ ಕಂಡಿರಬೇಕು. ಅವಕ್ಕೆ ನಾನು ಮಾರುಹೋದೆ. ಅವನನ್ನು ನಾನು ಮೆಚ್ಚುವುದಕ್ಕೆ ಇನ್ನೂ ಒಂದು ಕಾರಣವುಂಟು. ತಂದೆ ನನಗೆ ಬೇಕಾದ ಹಾಗೆ ಸೀರೆ ಕುಪ್ಪಸಗಳನ್ನು ತಂದುಕೊಡುತ್ತಿರಲಿಲ್ಲ; ಫೇಸ್‌ಪೌಡರ್, ಲಿಪ್‌ಸ್ಟಿಕ್, ಕ್ರೀಮುಗಳನ್ನು ತಂದುಕೊಡೆಂದರೆ ಬೈಯುತ್ತಿದ್ದರು. ಅವರ ಕೈ ಬರಿದಾಗಿದ್ದೇ ಹಾಗೆ ಉದಾಸೀನ ತಾಳಿರಬೇಕು. ಆದರೆ ನನ್ನ ಬೇಕು ಬೇಡಗಳನ್ನೆಲ್ಲ ಯೋಗೀಂದ್ರ ಒದಗಿಸಿಕೊಡುತ್ತಿದ್ದ. ತಂದೆ ಇವು ಎಲ್ಲಿಂದ ಬಂತೆಂದು ಅನುಮಾನದಿಂದ ಕೇಳುವುದಕ್ಕೂ ಎಡೆಯಿಲ್ಲ; ನನಗೆ ಕಸೂತಿಯ ಕೆಲಸ ಚೆನ್ನಾಗಿ ಬರುತ್ತಿತ್ತು. ಬಟ್ಟೆಯಮೇಲೂ ಹೂಬಳ್ಳಿಗಳು ಮಿಗಹಕ್ಕಿಗಳನ್ನು ಬಿಡಿಸಿ ಮಾರಿದರೆ ತುಂಬ ದುಡ್ಡು ಸಿಗುತ್ತಿತ್ತು?

"ಮತ್ತೇಕೆ ಸಾಲೆ ಬಿಟ್ಟೆ? ನೀನು ಕಸೂತಿ ಕೆಲಸದಿಂದಲೇ ಹಣಗಳಿಸಿ ಕಲಿತುಕೊಳ್ಳಬಾರದಾಗಿತ್ತೇ? ಇಂದೇನಾದರೂ ಕಸಬು ಹಿಡಿಯಬಹುದಾಗಿತ್ತು ಬೇರೆ. ನೀನು ಯೋಗೀಂದ್ರನ ಸೀರೆಕುಪ್ಪಸಗಳಿಗೆ ಆಸೆಪಡಬೇಕಾಗಿತ್ತೇ? ನೀನೇ ಅವನ್ನು ತರಿಸಿಕೊಳ್ಳಬಹುದಿತ್ತಲ್ಲ?"

"ಅವನು ಕಳಿಸುತ್ತಿದ್ದ. ನಾನು ಹಿಂತಿರುಗಿಸಲಾರದೆಹೋದೆ—"

"ಸರಿ. ನೀನು ಅವನ ಕೈಗೊಂಬೆಯಾದೆ."

"ಆಗಿಹೋಯಿತು. ನಾನು ತಪ್ಪಿಬಿದ್ದೆ. ಹೆಣ್ಣು ಒಡನೊಡನೆ ತೀರ್ಪಿಗೆ ಬರುತ್ತದೆ—ಹಿಂದು ಮುಂದಿಲ್ಲದೆ. ನಾನು ಅವನಿಗೆ ಸೋತೆನು—"

"ಆಗಲೇ ನಿನ್ನ ಚರಿತೆ ಕೆಟ್ಟಿತ್ತೇನು?"

ಚೆನ್ನಮ್ಮ ಮೊದಲು ಮಾತನಾಡಲಿಲ್ಲ. ಮತ್ತೆ ಅಂದಳು, "ನೀವು ಕೇಳಿದ ಮಾತಿನ ಮೊನೆ ಅರಿತೆ. ಅಲ್ಲಿಯುವರೆಗೆ ನನ್ನ ಚರಿತೆಯನ್ನು ನಾನು ಕಾಪಾಡಿ ಕೊಂಡು ಬಂದಿದ್ದರೆ, ಇಂದಿನ ನನ್ನ ಕತೆ ಬೇರೆ ಇರುತ್ತಿತ್ತು. ನಾನು ಸಾಲೆಗೆ ಹೋಗುತ್ತ ಬರುತ್ತಿರುವಾಗಲೇ ಎರಡು ತಿಂಗಳ ಗಬ್ಬವೊಂದನ್ನು ಕರಗಿಸಿ ಕೊಂಡೆ. ಯೋಗೀಂದ್ರನೇ ಇದಕ್ಕೆ ಬೇಕಾದ ಮದ್ದು ಒದಗಿಸಿಕೊಟ್ಟನು. ಆದರೆ ನಾನು ಸಾಲೆ ಬಿಡುವಹೊತ್ತಿಗೆ ನಾನು ತಿರುಗಿ ಬಸಿರನ್ನು ಹೊತ್ತುಕೊಂಡೆ. ಈ ಬಾರಿ ಅವನು ತಂದುಕೊಟ್ಟ ಮದ್ದು ಮಾಟಗಳೊಂದೂ ಕೆಲಸಕ್ಕೆ ಬರಲಿಲ್ಲ. ಆಗಲೇ ಮೂರು ತಿಂಗಳ ಲೆಕ್ಕವಾಗಿತ್ತು. ನನಗೂ ಮತ್ತೆ ಸಾಲೆಗೆ ಹೋಗಲು ಅಂಜಿಕೆಯಾಯಿತು; ತಂದೆ ಹೋಗಬೇಡವೆಂದುದು ಒಳಿತೆನಿಸಿತಾದರೂ, ಮುಂದೇನಾಗುವುದೋ ಎಂದು ಎದೆಯಲ್ಲಿ ಕಸಿವಿಸಿಯಾಯಿತು.

"ನಿನ್ನ ತಂದೆಗೆ ಇದರ ಗುಟ್ಟು ಹೊಳೆದೇ ಇಲ್ಲ ಎಂದರೆ ನಾನು ನಂಬುವುದಿಲ್ಲ."

"ಇಲ್ಲ. ತಾಯಿ ತೀರಿಕೊಂಡಮೇಲೆ ನಾನೇ ಅವರಿಗೆ ಅಡುಗೆ ಮಾಡಿ ಬಡಿಸುತ್ತಿದ್ದೆ. ಅವರು ಬೆಳಗೆದ್ದು ಕಚೇರಿಗೆ ಹೋದರೆ ಸಂಜೆ ಕಳೆದು ಬರುತ್ತಿದ್ದರು. ಬರಬರುತ್ತ, ನನಗೆ ಬಸಿರಿನ ಆಲಸೆ ಹುಟ್ಟಿತು. ಇರುಳು ಹಗಲು ನಿದ್ದೆ ಹೋಗಬೇಕೆನಿಸುತಿತ್ತು. ನಾನು ಅಲ್ಲಿ ಇಲ್ಲಿ ಬಿದ್ದುಕೊಳ್ಳುತ್ತಿದ್ದೆ. ಸಂಜೆ ಮನೆಗೆ ಬಂದವರು ಅವರೇ ಬಡಿಸಿ ಉಣ್ಣುತ್ತಿದ್ದರು. ಆದರೆ ಸಾಯುವ ಕಾಲಕ್ಕೆ ಅವರು ಈ ಗುಟ್ಟನ್ನು ಅರಿತಿರಬಹುದು. ನನ್ನನ್ನು ಬೇಕೆಂದೇ ಕೇಳದೆ ಇರಬಹುದು...."

"ಯೋಗೀಂದ್ರ ಎಂತಹ ಘಟಿಂಗನೆಂದು ಅವನ ಗೆಳೆಯನಾದ ನನಗೆ ಚೆನ್ನಾಗಿ ಗೊತ್ತು. ನಿನ್ನ ಮದುವೆ ಅವನೊಂದಿಗೆ ಎಂದಿಗೂ ಆಗುವಂತಿಲ್ಲ ವೆಂಬುದನ್ನೂ ನಾನು ಅರಿತಿದ್ದೆ. ಅವನ ತಂದೆ ಬದುಕಿರುವವರೆಗೂ ಈ ಮಗನು ತಾನಾರಿಸದ ಹೆಣ್ಣನ್ನು ಆರಿಸಲು ಬಿಡುವಂತಿರಲಿಲ್ಲ; ಅವರ ಮಾತು ಮೀರಿ

ಯೋಗೀಂದ್ರ ನಡೆದರೆ, ಅವನಿಗೆ ಬೇರೆ ಉಳಕೊಳ್ಳಲು ನೆರಳೂ ಇಲ್ಲ....ನಿನ್ನ ತಂದೆ ಇದನ್ನೆಲ್ಲ ಅರಿತೇ ಸುಮ್ಮನಿದ್ದರು. ಅವರ ಸಾವಿಗೂ ನೀನೇ ಕಾರಣ...."

"ನನಗೆ ಈಚೆಗೆ ಆ ಸಂದೇಹವೂ ಬಂತು. ಅವನು ಅಲ್ಲದಿದ್ದರೆ ಹಾಗೆ ತಟ್ಟನೆ ತೀರಿಕೊಳ್ಳಲು ಯಾವ ಕಾರಣವೂ ಇರಲಿಲ್ಲ. ಸಾಯುವ ಮುನ್ನಾದಿನ ಅವರು ಕಚೇರಿಗೆ ಹೋಗಿದ್ದರು. ಯೋಗೀಂದ್ರ ನೀವಂದಂತೆ ಅದೇ ಮಾತನ್ನು ಮುಂದಿಟ್ಟು ನನ್ನ ಬಾಳಿನ ಕರೆಯನ್ನು ಕೇಳದೆಹೋದನು. ತನ್ನ ಜೀವಕ್ಕಿಂತ ಹೆಚ್ಚೆಂದು ನನ್ನನ್ನು ಕೊಂಡಾಡಿ, ಮುದ್ದಾಡಿ ಕೊನೆಗೆ ಮದುವೆ ಮಾತೆತ್ತಿದೊಡನೆ ಅವನು ದೂರವಾದನು. ಸಾಲೆ ಬಿಟ್ಟಮೇಲೆ ಬಹಳ ದಿನಗಳವರೆಗೆ ಅವನ ಸುಳಿವೇ ಇರಲಿಲ್ಲ. ತಂದೆ ತೀರಿಕೊಂಡ ಮೇಲೆ ಒಮ್ಮೆ ನಮ್ಮ ಮನೆಗೆ ಬಂದನು. ಆಗ ಈ ಮಾತನ್ನು ತಿರುಗಿ ಎತ್ತಿದೆ; ಹೊಟ್ಟೆಯಲ್ಲಿರುವುದನ್ನು ಹೇಳಿ ತಿಳಿಸಿದೆ. ಅದೊಂದು ಮಾತಿಗೆ ಒಪ್ಪಲಿಲ್ಲ. "ನಾವು ಗಂಡ-ಹೆಂಡಿರಂತೆ ಅಲ್ಲದಿದ್ದರೂ ಇರಬಹುದಲ್ಲ; ಮದುವೆ ಎಂದೇನು?" ಎಂದು ಗದರಿಸಿದನು. ಹಾಗಾದರೂ ಸರಿಯೇ ಎಂದು ನಾನು ಅವನಿಗೆ ಮತ್ತೂ ಆಸೆಪಟ್ಟೆನು......."

"ನೀನು ಓದಿದವಳು. ಅಲ್ಲಾದರೂ ನಿನಗೆ ಸರಿದಾರಿಯನ್ನೇ ಹಿಡಿಯಲೆಡೆಯಿತ್ತು. ತಂದೆತಾಯಿಲ್ಲದ ತಬ್ಬಲಿಯಾಗಿ ಉಳಿದ ಮೇಲೆ ಮತ್ತೂ ಈ ಮೋಸದ ಬಲೆಯಲ್ಲಿ ಬೀಳದಂತೆ ಎಲ್ಲಾದರೂ ಅನಾಥಾಶ್ರಮಕ್ಕೆ ಸೇರಿಕೊಳ್ಳಬಹುದಿತ್ತಲ್ಲವೇ? ನಿನಗೆ ಆಗ ಯಾರಾದರೂ ಹೇಳುವವರು ಕೇಳುವವರು ಇದ್ದರೂ ನೀನು ಅವರ ಮಾತಿಗೆ ಕಿವಿಕೊಡುತ್ತಿದ್ದೆಯೋ ಏನೋ!"

ತಮ್ಮ ಹೇಳಿದ ಈ ಕೊನೆಯ ಮಾತಿನಲ್ಲಿ ಇರಿತವಿದ್ದಿತು, ಇಂಗಿತವಿದ್ದಿತು. ಚೆನ್ನಮ್ಮನ ಕಣ್ಣುಗಳು ಒಡನೆ ಅರಳಿ ಮಿಂಚುಹೊಳೆದುವು. ತಮ್ಮ ತಿರುಗಿ ಅಂದನು: "ನೀನು ಎಂದು ನನ್ನ ಮಾತನ್ನು ಕೇಳದೆ, ಯೋಗೀಂದ್ರನನ್ನು ನಂಬಿದೆಯೋ ಅಂದೇ ನೀನು ಕೆಟ್ಟೆ."

"ನಿಜ. ಆದರೆ ಅವನು ನನ್ನನ್ನು ತೀರ ಬಿಟ್ಟುಬಿಡಲಿಲ್ಲ. ನನ್ನನ್ನು ನಮ್ಮ ಮನೆಯೊಳಗೇ ಇರಿಸಿ ಸಾಕತೊಡಗಿದನು. ತಂದೆ ತೀರಿಕೊಂಡ ನಾಲ್ಕು ಐದು ತಿಂಗಳೊಳಗೆ ನಾನು ಒಂದು ಗಂಡು ಕೂಸನ್ನು ಹಡೆದೆನು. ಆದರೆ ಹಡೆದ ಕೂಸು ಎರಡು ಮೂರು ತಿಂಗಳೊಳಗೆ ಕಣ್ಣುಮುಚ್ಚಿಬಿಟ್ಟಿತು. ಅವನ ಕೈಯಿಂದಲೇ ಅದರ ಕೊಲೆಯಾಯಿತೆಂದು ಅವನು ನಮ್ಮನೆಗೆಂದು ಇಟ್ಟ ಚಾಕರಿಯವಳೇ ಈಚೆಗೆ ಹೇಳಿದಳು—"

"ಅಯ್ಯೋ!" ಎಂದು ತಮ್ಮ ನಿಟ್ಟುಸಿರುಗರೆದನು; ತಲೆ ಬಾಗಿದನು.

"ಕೂಸನ್ನು ಕೊಂದು ಹೋದವನು ಮತ್ತೆ ನನ್ನ ಮೋರೆಯನ್ನಾದರೂ ನೋಡಲು ಬಂದಿರಲಿಲ್ಲ. ಬೇರೊಂದು ಹೆಣ್ಣನ್ನು ಮದುವೆಯಾಗಿ ತಂದು ಎರಡು ತಿಂಗಳಾಗಬೇಕಾದರೆ ಅವಳು ಮೈ ಬಾತು ತೀರಿಕೊಂಡಳು. ನನ್ನ ಕಡೆಗೆ ಯಾರೂ ನೋಡುವವರಿಲ್ಲದೆ ನಾನು ಕೆಲವು ದಿನ ಬರಿ ಹೊಟ್ಟೆಯಲ್ಲಿ ಮಲಗುವ ಪಾಡು ಬಂತು. ಕೊನೆಗೆ ನಾನು ಈ ಕಸಬು ಮಾಡಲು ಇಳಿದೆನು........"

"ಆಗ ನಿನ್ನ ಕಸೂತಿ ಎಂಬ್ರಾಯಿಡ್ರಿಯೆಲ್ಲ ಎಲ್ಲಿಗೆ ಹೋಯಿತು ಚೆನ್ನಮ್ಮಾ?"

"ನನಗೆ ಆಗ ಹಸಿವಾಗಿತ್ತು; ಬದುಕಬೇಕೆಂಬ ಆಸೆಯೂ ಇತ್ತು. ಹೀಗೆ ಬದುಕಿಕೊಂಡೆ."

"ಆದರೆ ಇದೊಂದಲ್ಲದೆ ಬೇರೆ ಯಾವ ದಾರಿಯೂ ಹೊಳೆಯಲಿಲ್ಲವೇ?"

"ಒಂದು ಮಾತಿಗೆ ಎಡೆಗೊಡಿರಿ. ಈ ಹೆಣ್ಣುಮಕ್ಕಳನ್ನು ಹೀಗೆ ಮೋಸ ಪಡಿಸುವ ಸಂಚನ್ನು ನಿಲ್ಲಿಸಲು ಯಾವ ಹಂಚಿಕೆಯೂ ಇರಲಾರದೆ? ಉಂಟೇ?"

"ಏನೂ ಇಲ್ಲ. ಈ ಮೋಸದಿಂದ ನಮ್ಮ ಹೆಣ್ಣುಮಕ್ಕಳು ಬಿಡುಗಡೆಯಾಗಬೇಕಾದರೆ ಅವರಿಗೆ ಬರೇ ಓದುವ ಬರೆವ ಪಾಠವನ್ನು ಕೊಡದೆ, ತಾವು ಹುಟ್ಟಿ ಬೆಳೆದು ನಿಂತ ಬಳಗದ ಅಚ್ಚುಕಟ್ಟುಗಳು, ನೇಮಗಳು, ಒಳ್ಳೆಯ ಮಾದರಿ ನಡೆವಳಿಕೆಗಳೇ ಮುಂತಾದುವುಗಳನ್ನು ಅರುಹಬೇಕು. ನೀರಿಗಿಳಿವ ಮೊದಲು ಆಳನೋಡಬೇಕೆನ್ನುವಂತೆ, ನಮ್ಮ ಹೆಣ್ಣುಮಕ್ಕಳು ತಾವು ಕೆಡುವ ಮೊದಲು ದೇವರು ಕೊಟ್ಟ ಈ ಮೆದುಳನ್ನು ತುಸ ಬೆದಕಲು ಅರಿಯಬೇಕು. ಹಿಂದು ಮುಂದನ್ನು ಎಣಿಸುವವರಾಗಬೇಕು. ಹೆತ್ತವರು ಸರಿಯಾಗಿ ಮಕ್ಕಳನ್ನು ತರಬೇತು ಮಾಡದೆ ಬಿಟ್ಟರೆ ಆಗುವುದು ಹೀಗೆಯೇ!...."

"ಹೆತ್ತವರು ಏನು ಮಾಡಿಯಾರು? ಹೆಣ್ಣು-ಗಂಡು ಒಂದಾದರೆ ಕೂಡಿಸುವ 'ಲಾ' ಉಂಟು. ಈ ಮೋಸದ ಸೆಳೆಗೆ ಒಬ್ಬಳು ಒಮ್ಮೆ ಸಿಕ್ಕಿದಳೆಂದರೆ 'ಲಾ' ಹೊತ್ತಿಗೆಯೊಳಗೇ. ಅದರ ಮೇಲೆ ತಂದೆತಾಯಿಗಳು ತಿಳಿದರೂ ಏನು ಮಾಡಿಯಾರು?...."

"ಲಾ ಏನೂ ಕೆಟ್ಟದು ಮಾಡಿಲ್ಲ. ಅದನ್ನು ತಮ್ಮ ಕೈಯಲ್ಲಿ ಇಟ್ಟುಕೊಳ್ಳುವುದರ ಬದಲು ಹೆತ್ತವರ ಕೈಯಲ್ಲಿ ಕೊಡುವುದೇ ಒಳ್ಳಿತು...."

"ಅದೇ. ಈ ಹೆತ್ತವರ ಅಂಜಿಕೆಯಿಂದಲೇ ಈ ಪಾಡು ಬೆಳೆಯುತ್ತಿದೆ. ತಾನೊಲಿದ ಹೆಣ್ಣನ್ನು ಗಂಡಾಗಲಿ, ಗಂಡನ್ನು ಹೆಣ್ಣಾಗಲಿ ಕೂಡಿಕೊಳ್ಳುವ ಎಡೆ ಇಲ್ಲ; ಹಕ್ಕಿಲ್ಲ."

"ಅದನ್ನು ನಿನ್ನ ಕೈಯಲ್ಲಿ ತಿರುಮಲ ಕೊಟ್ಟಾಗ ನೀನದನ್ನು ಬೀದಿಗೆಸೆದು ಜಂಭದಿಂದ, ಹಮ್ಮಿನಿಂದ ಅದನ್ನು ತುಳಿದು ಮಣ್ಣಿಗೆ ಮಾಡಲಿಲ್ಲವೇ? ಎಲ್ಲರ ಒಪ್ಪಿಗೆಯಿಂದ ನಿನ್ನನ್ನು ಮದುವೆಯಾಗಲು ಮುಂದೆ ಬಂದ ತಿರುಮಲನ ತಿಳಿಯಾದ ನೇಹವನ್ನು ನೀನು ನೆನೆದುಕೋ, ನಿನ್ನನ್ನು ಚಿಲ್ಲರೆ ದುಡ್ಡಿನ ಆಸೆ ತೋರಿಸಿ ಮೋಸಮಾಡಿದ ಯೋಗೀಂದ್ರನ ಡೊಂಬರಾಟವನ್ನು ನೆನೆದುಕೋ. ನೀನು ತಿಳಿವಳಿಕೆಯವಳಿದ್ದಿದ್ದರೆ ಈತನನ್ನು ನಂಬುತ್ತಿದ್ದೆಯಾ? ಹೀಗೆ ಹಾಳಾಗುತ್ತಿದ್ದೆಯಾ? ಮೊದಲು ಮದುವೆ ಮತ್ತೆ ಒಲವೆಂದು ಹೇಳುವ ನಮ್ಮ ಹಿರಿಯರ ಮಾತಿನಲ್ಲಿ ಹುರುಳುಂಟು; ನಿನ್ನದು ಮೊದಲು ಒಲವು ನುತ್ತೆ ಮದುವೆಯ ಮಾತು, ಅದು ಮೋಸ!"

"ಹೇಗೋ. ಆದರೆ ದುಡ್ಡಿನ ಬಲವೊಂದು ಏನನ್ನೂ ಮಾಡೀತು ನಮ್ಮ ದಿಡೆಲ್ಲ ಆಸೆ. ಹಸಿದಾಗ, ದಿಕ್ಕಿಲ್ಲದೆ ಕಂಗಾಲಾದಾಗ ಹೆಣ್ಣು ಹೀಗೆ ಅಗ್ಗವಾಗಿ ಕೆಡುತ್ತಾಳೆ. ನಾವೀಗ ಮಾತನಾಡಿದುದರಲ್ಲಿ ನಿಮ್ಮ ಒಂದು ಮಾತು ನನಗೆ ಒಪ್ಪಿಗೆಯಾಯಿತು. 'ಕಸೂತಿ, ಎಂಬ್ರಾಯಿಡ್ರಿಯೆಲ್ಲ ಎಲ್ಲಿಗೆ ಹೋಯಿತು?' ಎಂದು ನೀವು ಕೇಳಿದಿರಿ. ಅವುಗಳಂತೆ ಇನ್ನೂ ಹಲವು ಮನೆ ಕೈಗಾರಿಕೆಗಳಿವೆ. ಅವನ್ನು ಕೊಂಡು ಹೆಣ್ಣು ಬದುಕಬಹುದು, ನಿಜ. ಆದರೆ ಇಂದಿನ ದಿನ ಮಾನ ಎಲ್ಲವನ್ನೂ ಹಗುರಮಾಡಲು ಹೊರಟಿದೆ. ದುಡಿದು ಎತ್ತಿ ಬದುಕಬೇಕೆಂಬವರು ಕಡಿಮೆ. ದುಡಿಯದೆ ಉಣ್ಣಬೇಕೆನ್ನುವವರು ಹೆಚ್ಚು. ಹೆಣ್ಣಾದರೂ ಈ ಲೆಕ್ಕಕ್ಕೆ ಹೊರತಾದವಳಲ್ಲ."

"ಹೋಗಲಿ, ಆದದ್ದು ಆಗಿಹೋಯಿತು. ನೀನು ಕೆಟ್ಟಮೇಲೆ ತಿಳಿವಿನ ಮಾತಾಡಲು ಹೊರಟಿರುವೆ. ಮುಂದೇನು ಮಾಡುವೆ ಹೇಳು—"

"ಏನು ಮಾಡಬಹುದು, ಅಣ್ಣಾ?"

"ನೀನು ಮಾಡುವೆಯಾದರೆ ಹೇಳುತ್ತೇನೆ."

"ಖಂಡಿತ ಮಾಡುವೆ—"

"ಇದೇ ತೀರ್ಪಾದರೆ," ನೀನು ನಿನ್ನ ಈ ಕಸಬನ್ನು ಇಂದಿಗೇ ಸಾಕು ಮಾಡಬೇಕು. ಇನ್ನೂ ನಿನಗೆ ಈ ಕಾಯದ ಸೊಗಸಿನಲ್ಲಿ ಆಸೆಯಿದೆಯೇ?'...."

"ಇಲ್ಲ!"

"ಹಾಗಾದರೆ ನಾಳೆ ಬೆಳಗಾತ ಹಜಾಮನನ್ನು ಕರೆಸಿ, ನಿನ್ನ ತಲೆಕೂದಲನ್ನೆಲ್ಲ ಕತ್ತರಿಸಿ ಹಾಕಬಲ್ಲೆಯಾ?"

"ಹಾಗೇ ಮಾಡಿಸುವೆ. ಇನ್ನು ನನಗೆ ಅದು ಬೇಕಾಗಿಲ್ಲ."

"ಹಾಗಲ್ಲ. ನನ್ನೆಣಿಕೆಯಲ್ಲಿ ಈ ಪನಿಶ್‌ಮೆಂಟು ಹಾದರ ಮಾಡಿದವರಿಗೇ ಸಲ್ಲಬೇಕು, ಗಂಡಂದಿರನ್ನು 'ಕಳಕೊಂಡವರಿಗಲ್ಲ. ಗಂಡಸರು ಹಾದರ ಮಾಡಿದರೆ ಅವರ ಮುಂದಲೆಯನ್ನು ಬೋಳಿಸಿಡಬೇಕು."

ಚೆನ್ನಮ್ಮ ತಮ್ಮುವಿನ ಈ ಮಾತುಗಳನ್ನು ಕೇಳಿ ನಗುತ್ತಿದ್ದಳು. ಅವನು ಮುಂದುವರಿದ: "ನೀನು ಇಲ್ಲಿಂದ ನಾಳೆಯೇ ಹೊರಟುಹೋಗಿ ಹಳ್ಳಿಗಳ ಜನರಿಗೆ ಅಕ್ಕರಗಲಿಸಬೇಕು, ತಿಳಿವು ಕೊಡಬೇಕು, ನಿನ್ನ ಬಾಳಿನ ಬಳಿಕೆಯನ್ನು ಕೊಂಡು ನಾಡಿನ ಸೋದರಿಯರನ್ನೂ ನಾಡನ್ನೂ ಎಚ್ಚರಿಸಬೇಕು."

"ಇದರಿಂದ ನಮ್ಮವರಿಗೆ ಒಳಿತಾಗುವುದೆಂಬ ನಂಬುಗೆಯೇ?"

"ನೀನೇ ಹೇಳುವೆ ಆ ಮೇಲೆ."

"ಸರಿ ಹಾಗಾದರೆ, ನಿಮ್ಮ ಎದುರಿನಲ್ಲಿಯೇ ನಾಳೆ ಮಂಡೆ ಬೋಳಿಸುತ್ತೇನೆ, ಕೆಂಪು ಸೀರೆ ಉಡುತ್ತೇನೆ, ನೀವಂದ ಕೆಲಸವನ್ನು ಹೊತ್ತು ತಿರುಗುತ್ತೇನೆ. ಆದರೆ ಊಟಕ್ಕೆಲ್ಲಿ ಹೋಗಲಿ?...."

"ಕಸೂತಿ ಮಾಡು—"

ಅವಳು ಸುಮ್ಮನಾದಳು. ತಮ್ಮು ಹೇಳಿದನು: "ನೀನು ಇನ್ನೂ ಒಂದು ಸರಿಯಾದ ತೀರ್ಪಿಗೆ ಬಂದಿಲ್ಲ. ಇನ್ನು ನಾನು ಹೋಗುತ್ತೇನೆ—" ಎಂದು ಎದ್ದನು. ಚೆನ್ನಮ್ಮ ಅವನನ್ನು ತಡೆದಳು. "ಇಗೊಳ್ಳಿ, ನಂಬುಗೆ ಕೊಡುತ್ತೇನೆ" ಎಂದು ಆಕೆ ಅವನ ಕೈ ಹಿಡಿದಳು. ತಮ್ಮು ಈಗ ಯಾವ ಅಂಜಿಕೆಗೂ ಒಳಗಾಗಲಿಲ್ಲ. ತನ್ನ ಸೋದರಿಯೊಬ್ಬಳು ಒಳ್ಳೆಯ ದಾರಿಹಿಡಿಯಲು ಪಣ ತೊಟ್ಟಳಲ್ಲಾ ಎಂಬ ಹಿಗ್ಗಿನಿಂದ ನಂಬುಗೆ ಪಡೆದನು.

"ಇನ್ನು ನಾಳೆ ಹೋಗಬಹುದು. ಇಂದು ಇಲ್ಲೇ ತಂಗಿರಿ. ಹೊತ್ತೂ ಬಹಳವಾಯಿತು" ಎಂದು ಆಕೆ ಮೆಲುನುಡಿದಳು. 'ಅಣ್ಣಾ', 'ಅಣ್ಣ' ಎಂಬ ಮಾತು ಸೇರಿಸಿ ತುಂಬ ಒತ್ತಾಯಪಡಿಸಿದಳು. ತಮ್ಮು ಅಕ್ಕರೆಯಿಂದ ಒಪ್ಪಿಕೊಂಡನು.

ಇಬ್ಬರೂ ಮಲಗಿ ದೀಪ ಆರಿಸಿದರು. ತಮ್ಮುವಿಗೆ ಒಡನೆ ಜೊಂಪು

ಹತ್ತಿತು. ಇನ್ನೇನು, ಅವನು ಪೂರ್ತಿ ಕಣ್ಣು ಮುಚ್ಚಿರಲಿಲ್ಲ. ಅವಳು ಗೆದ್ದಳು; ಚೆನ್ನಮ್ಮ ಚೆಲ್ವಿ ಗೆದ್ದಳು. "ಇನ್ನೆಲ್ಲಿಗೆ ಹೋಗುವೆ ತಮ್ಮೂ? ನೀನೊಬ್ಬ ಬಾಕಿಯಿದ್ದೆ—"ಎಂದು ಅವನನ್ನು ಕೋದಪ್ಪಿಕೊಂಡಳು, ಮುದ್ದಾಡಿದಳು. ತಮ್ಮು ಆಕೆಯನ್ನು ಕೆಳಕ್ಕೆ ಈಡಾಡಿ ತಡಬಡಿಸಿ ಎದ್ದನು. ಕೋಣೆಯ ಚಿಲಕ ಗಟ್ಟಿಯಾಗಿತ್ತು. ಅವನಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಅವಳು ಗದ್ದರಿಸಿದಳು: "ನಾನು ಈಗ ಬೊಬ್ಬೆ ಹಾಕುವೆ. ನಿನ್ನ ಮಾನವ ತೆಗೆವೆ—ಸುಮ್ಮನೆ ಇರು!"

ತಮ್ಮು ತೋಳನ ಬಲೆಗೆ ಬಿದ್ದ ಕುರಿಮರಿಯಾದನು. ಮಾರನೆಯ ದಿನ ಬೆಳಗಾತ ಅವನು ಎದ್ದು ಪೇಟೆಗೆ ಹೊರಟಾಗ ಜನ ಕಂಡು ಕಂಡವರು ನಗಹತ್ತಿದರು. ಯಾರೋ ಒಬ್ಬರು ಕೇಳಿದರು ನಿನ್ನ ಮುಂದಲೆಯನ್ನು ಯಾರು ಕೊಯ್ದರು, ತಮ್ಮೂ?"

ತಮ್ಮು ನಾಚಿಗೆಯಿಂದ ತಲೆಗೆ ಮುಸುಗೆಳೆದುಕೊಂಡು ತನ್ನ ಹೋಟೆಲು ರೂಮಿಗೆ ಓಡಿದನು.

---

# ಐದು ಸಂಜೆ

ಸಂಜೆಯು ಹೊತ್ತು.

ಪಟ್ಟಣದಲ್ಲಿ ಕಿಕ್ಕಿರಿದ ಜನಜಂಗುಳಿ. ತುಂಬಿದ ಕೆಲಸ ಇರುತ್ತದೆ ಬೇರೆ. ಉಸಿರಾಡುವುದಕ್ಕೂ ತುಸು ಬಿಡುವು ಇರುವುದಿಲ್ಲ. ಇಂದಿನ ಜಗತ್ತು ಬಿಡುವಿಗಾಗಿರುತ್ತ ಸಂಜೆಯು ಹೊತ್ತು ದಿನಪಿಡೀ ಗೇದು ದಣಿದುದನ್ನು ಇಳಿಸಿ ಕೊಳ್ಳುವುದಕ್ಕೆ ಹರಕೆ ಹೊತ್ತಂತೆ ಬರುತ್ತಾರೆ. ಸಂಜೆ ಬಂತೆಂದರೆ ಜನ ತಮ್ಮ ತಮ್ಮ ಬಾಳಿನ ಎಲ್ಲ ಬನ್ನ ಇಲ್ಲಿಗೆ ಮುಗಿಯಿತೆಂತಲೇ ಉಸಿರುಬಿಡುತ್ತಾರೆ.

ಶಾಮು ಕಚೇರಿಯಿಂದ ಬಂದನು.

ಪಟ್ಟಣದಲ್ಲಿ ಉಳಕೊಳ್ಳುವುದೆಂದರೆ ಮೋಜೆನಿಸುತ್ತದೆ. ನಮ್ಮ ಊರ ಹಳ್ಳಿಗಳಲ್ಲಿ ಒಂದು ಸಣ್ಣ ಮನೆ, ಮನೆಗೆ ಸುತ್ತ ಹಿತ್ತಿಲು, ಹಿತ್ತಿಲಿಗೊಂದು ಬೇಲಿ ಇನಿಷ್ಟು ಇರುತ್ತವೆ. ಪಟ್ಟಣದ ಗಜಿಬಿಜಿಯಲ್ಲಿ ಇವೆಲ್ಲ ಇರುವುದಿಲ್ಲ. ಮೇಲುಪ್ಪರಿಗೆಯು ನಾಲುಮನೆಗಳು ಬೀದಿಯು ಇಕ್ಕಡೆಗೂ ಎದ್ದು ನಿಂತಿರುತ್ತವೆ. ಕೆಳಗೆ ಅಂಗಡಿಗಳು; ಮೇಲೆ 'ಮನೆ'ಗಳು.

ಶಾಮು ಮತ್ತು ಆತನ ಮಡದಿ ಮಿರಾ ಒಂದು ಸಣ್ಣ ಮನೆಮಾಡಿ ಕೊಂಡಿದ್ದರು. ಅದರಲ್ಲಿ ಇರುವುದು ಎರಡು ಸಣ್ಣ ಬಿಲಗಳಂತಿರುವ ಕೋಣೆ ಗಳು. ಅಡುವುದು, ಊಡುವುದೆಲ್ಲ ಒಂದರಲ್ಲಿ; ಅಲ್ಲಿಯೇ ಮಿಂದು ಉಡು ವುದೂ ಆಗಬೇಕು. ಇನ್ನೊಂದರಲ್ಲಿ ಮಲಗುವುದು; ಅಲ್ಲಿಯೆ ಒಂದು ಮನೆ ಯಲ್ಲಿ ತುಂಬುವ ಎಲ್ಲ ಮನೆವಾರ್ತೆಗಳನ್ನು 'ಮನೆಮಾಡಬೇಕು.'

ಶಾಮು ಈ ಮನೆಯಲ್ಲಿ ಕುಳಿತುಕೊಂಡನು. ಕಿಸೆಯಲ್ಲಿ ತುರುಕಿಸಿ ಕೊಂಡು ಬಂದ ಪೇಪರನ್ನು ತೆಗೆದು ಓದತೊಡಗಿದನು.........

'ನರನು ವಾನರನೇ?........ನರನು ಹೇಗಾದನು?

ಧರ್ಮ ನಾಶವಾಗುತ್ತ ಬರುತ್ತದೆ; ಅಧರ್ಮವು ತಲೆಯೆತ್ತುತ್ತಿದೆ........ ಸುಳ್ಳುಕಂತೆಗಳು, ಮರೆಮೋಸಗಳು, ಲಂಚದ ಸಂಚುಗಳು, ಹಿಂದೂಧರ್ಮದ ಜೀವಾಳ—ಜನರ ಅಜ್ಞಾನದ ತಳಹದಿಯಮೇಲೆ 'ಬ್ರಾಹ್ಮನಿಕಲ್' ಎನ್ನುವ ಹಿಂದೂಧರ್ಮವು ನೆಲೆನಿಂತಿದೆ. ಇಂಗ್ಲಿಷ್ ಓದಿದ ಜನರು ಇದನ್ನು ಮನ ಗಂಡು ಕ್ರಿಸ್ತಧರ್ಮಕ್ಕೆ ಮತಾಂತರಗೊಳ್ಳುವುದು ...ಇತ್ಯಾದಿ, ಇತ್ಯಾದಿ....'.

ವಿಾರಾ ಕುದಿವ ಕಾಫಿಯ ತಟ್ಟೆಯನ್ನು ಸೆರಗಿನಿಂದ ಹಿಡಿದುಕೊಂಡು ತಂದು ಮುಕ್ಕಾಲ ಮೇಜಿನ ಮೇಲಿಟ್ಟಳು. ಕಾಫಿಯ ಕುದಿದ ಆವಿ ಸೋಂಕಿ ತುಸು ಕೈಸುಟ್ಟಿತು. 'ಹ್ಯಾs!....ಹೂs!ee....!' ಎಂದು ಕೈಬೆರಳುಗಳನ್ನು ಬಾಯಿಗೆ ಹಿಡಿದು ಊದಿದಳು.

'ಈಚೆಗೆ ಬಾ, ವಿಾರ. ಎಂತಾ ಹೆಣ್ಣೋ ನೀನು?' ಎಂದ ಶಾಮು ಕಣ್ಣು ಅರಳಿಸುತ್ತ. ಮಿಾರ ಬಾಯಿಗೆ ಬೆರಳುಹಿಡಿದು ಫ್ ಫ್! ಎಂದಳು:

'ಮೆಲ್ಲ ಮಾತಾಡಿ....ಆಚೆ ಕೋಣೇಲಿ ನಗ್ತಾರೆ!........' ಎಂದು ಮೋರೆ ತುಂಬ ಹುಸಿನಗೆಯನ್ನು ತೋರಿದಳು.

'ಬಾರದ ಹೆಣ್ಣು!....ಹೆಣ್ಣೆಂದರೆ ಹೆಣ್ಣೇ!'

ಶಾಮು ಸಿಟ್ಟುಗೊಂಡಿರಲಿಲ್ಲ.

'ನಿಮಗೆ ನಾಚಿಗೇನೇ ಇಲ್ಲಾಂತ ಕಾಣ್ಸುತ್ತದೆ. ನಿನ್ನೆ ನಾನು ತೆರೇಸಿಗೆ ಹೋಗುವಾಗ ಅಲ್ಲಿ ಮಾತ್ನಾಡತಾ ಇದ್ರು. ನಿಮ್ಮ ಹೆಸರೆತ್ತಿ "ವಿಾರ್ನ ಜತೆಗೆ ಮಕ್ಕಳಾಟಿಕೆ ಆಡ್ತಾ ಇರ್ತಾನೆ!........' ಅಂತ ಒಬ್ಬ ಹೇಳಿದ; ಅದಕ್ಕೆ ಇನ್ನೊಬ್ಬ ಹೇಳುತ್ತಿದ್ದ — "ನಿಜಕ್ಕೂ ಹಕ್ಕಿಗಳ ಹಾಗಿದ್ದಾರೆ!" ಎಂತ!....ನೀವೂ........ ಎಂದು ಆಕೆ ಕೊಂಕು ಮುರಿದಳು.

'ಯಾರಿಗೇನು, ನಾವು ಹೇಗಿದ್ದರೆ? ನಿನ್ನನ್ನು ಮೆಚ್ಚಿ ತಂದಿದೇನೆ. ನಿನ್ನೊಡನೆ ನಾನು ಮತ್ತೆ ಹೇಗಿರ್ಬೇಕೂಂತಿ ವಿಾರಾ? ಚೆಲು ಹಕ್ಕಿಗಳಂತಿರ ಬಾರ್ದೂಂತೀಯಾ?............ಹಕ್ಕಿಗಳ ಸಂಸಾರ ಏನು ಸೊಗಸು ಅಂತಿಯೇನು? ........ಹಗಲು ಹೊತ್ತು ದಣಿದು ದಣಿದು ಬೇಸತ್ತು ಸಂಜೆಯ ಹೊತ್ತಿಗೆ ಅವು ಜತೆಜತೆಯಾಗಿ ಕೂಡಿಕೊಂಡು ಚಿಲಿಪಿಲಿಗುಟ್ಟುತ ನಲಿವಾಗ ಎಷ್ಟು ನಲಿಕೆ ಯಾಗುವುದು ಗೊತ್ತೇ? ನಾವೂ ಚೆಲುವಾದ ಈ ಸೃಷ್ಟಿಯ ಒಂದಿಗೆ ಚೆಲುವು ಗೂಡಬೇಕು, ವಿಾರ; ಅದು ನನ್ನ ಆಸೆ....ಅದಕೆಂತಲೇ ನನಗೆ ಹಕ್ಕಿಗಳನ್ನು ಅದರಲ್ಲಿಯೂ, ಎಣೆವಕ್ಕಿಗಳನ್ನು ಕಂಡರೆ ಹೆಚ್ಚು ಹೆಚ್ಚು ನಲಿಕೆಯಾವುದು.... ........ಅವುಗಳಿಗೆ ಯಾವ ಕಟ್ಟುಕಟ್ಟಳೆಗಳೂ ಇಲ್ಲ ನೋಡು....ವಿಾರಾ........ ನೋಡು, ಕಾಫಿ ಚೆಲ್ಲುತ್ತದೆ....'

ವಿಾರ ಕಾಫಿ ತಣಿಸುತ್ತಿದ್ದಳು.

ಶಾಮು ಕೂಗಿದ: 'ವಿಾರಾ, ಈಚೆಗೆ ಬಾ, ನೋಡು!........' ವಿಾರ ತಿರುವಿ ನೋಡಲಿಲ್ಲ.

ಶಾಮು ಕುರ್ಚಿಯಿಂದ ಎದ್ದನು. ಮೀರ ಕಾಫಿ ಆರಿಸುತ್ತಿದ್ದಂತೆಯೇ ಆಕೆಯ ಸಿರಿಮೊಗದ ಚೆಂದುಟಿಗಳನ್ನು ಒಂದೇ........ನಿಂದ ಅಚ್ಚೊತ್ತಿದನು. ಆಕೆಯನ್ನು ನಾಚಿಕೆ ಬಳಸಿತು; ಮುದುಡಿಕೊಂಡಳು. ಆದರೂ ಶಾಮು ಬಿಡಲಿಲ್ಲ. ಆಕೆಯನ್ನು ಸೆಳೆದುಕೊಂಡು ಬಂದು, ತಾನು ಕುಳಿತಿದ್ದ ಕುರ್ಚಿಯಲ್ಲಿ ಕುಳ್ಳಿರಿಸಿದನು.

‘ಅಯ್ಯೋ!........ಸ್ಸೀ........ನಾಚಿಕೆಯಿಲ್ಲಪ್ಪ ನಿಮಗೆ?....’ ಎಂದು ನಸು ನಕ್ಕಳು.

‘ನೀನು ಇಲ್ಲೆ ಕುಳಿತಿರು. ನಾನೇ ಕಾಫಿ ಎತ್ತಿಕೊಡುತ್ತೇನೆ...........’ ಎಂದು ಶಾಮೂ ಮೇಜಿನ ಬಳಿಗೆ ಸಾರಿದನು. ಮೀರ ಸುಮ್ಮನೆ ಕುಳ್ಳಿರಲಿಲ್ಲ. ಓಡಿಬಂದು ಗಂಡನನ್ನು ತಡೆದಳು. ‘ನೀವು ಕುಳ್ಳಿರ್ರೀ ಎಂದರೆ ಕೇಳಬೇಕು. ನಾನಿರುವಾಗಲೂ........ನಿಮಗೆ ಹೆಚ್ಚಿಹೋಗಿದೆ!’ ಎಂದು ಗಂಡನ ರಟ್ಟೆಹಿಡಿದು ಈಚೆಗೆ ಎಳೆದಳು. ಶಾಮೂನ ಕಣ್ಣು ಆಕೆಯ ಚೆಲುವೊಗದಲ್ಲಿಯೇ ನೆಟ್ಟಿತ್ತು. ಮೀರ ತುಸು ನಗೆತೋರಿದಳು.

ಆ ಚೆಲುಮೊಗದಲ್ಲಿ ತೇಲಿ ಹರಿದ ಮೆಲ್ನಗು, ಯಾವುದೋ ಬೇರೊಂದು ಲೋಕದಲ್ಲಿ ಇರುವಂತೆ ಕಂಡ ಸೊಗದ ಕನಸಿನಂತೆ, ಆತನ ಮನವನ್ನು ಕದ್ದುಕೊಂಡಿತು. ಮನ ಎಲ್ಲಿಯೋ ಅಲೆಯತೊಡಗಿತು. ಆಕೆಯ ಚೆಲುವು ಶಾಮುನನ್ನು ಪೂರಾ ಮೂಕು ಮಾಡಿಬಿಟ್ಟಿತ್ತು. ‘ದಿನವೂ ಮೀರ ಚೆಲುವು ತುಂಬುತ್ತಿರುವಳೇನೋ!’ ಎನ್ನುವಂತೆ ಆತನ ಮನ ಎಣಿಕಹಾಕುತ್ತಿತ್ತು. ಮೀರ ತನ್ನ ನಡೆನುಡಿಗಳಲ್ಲಿ ತುಂಬುವ ಚೆಲುವು, ಇನ್ನೇನು ಶಾಮುನನ್ನು ಕನಸುಗಾಣಿಸದೆ ಬಿಡುವುದೇನು? ಶಾಮು ಕಬ್ಬಿಗನಾಗಿದ್ದರೆ ಆಕೆಯ ಕುಲು ಕುಲು ನಗೆಯನ್ನು ಇನ್ನಾವ ಸುಂದರ ಬಣ್ಣನೆಗೆ ಎಡೆಗೊಳ್ಳುತ್ತಿದ್ದನೋ. ಅವನು ಹಿಗ್ಗಿದ್ದನು.

‘ಕಾಫಿ ಬಿಸೀ ಉಂಟು ಊ....!’ ಎನ್ನುತ್ತ ಮೀರ ಒಂದು ಲೋಟದಲ್ಲಿ ತುಂಬ ಕಾಫಿ ತಂದುಕೊಟ್ಟಳು. ಒಂದು ತಟ್ಟೆ ತಾನೂ ತೆಗೆದು ತಾನು ಕುಡಿವಂತೆ ಎತ್ತಿಕೊಂಡಳು. ಆಕೆಯ ಓರೆಗಣ್ಣು ಕದ್ದುನೋಡುತ್ತಿತ್ತು ಕೂಡ. ಶಾಮು ಕಾಫಿ ತಣಿದಿರಬೇಕೆಂದು — ಒಂದೇ ಗುಟುಕು ಕುಡಿದಿದ್ದ........ “ಹುಚ್ಚು ಹುಡುಗಿ!........” ಎಂದು ಮೋರೆ ಚಪ್ಪರಿಸಿದ. ಬಾಯಿ ಸುಟ್ಟು ಹೋಗಿತ್ತು. ಮೀರ ಬಿದ್ದೆದ್ದು ನಗಲಾರಂಭಿಸಿದಳು.

ಆತನಿಗೆ ಅಂದಿನ ಕಾಫಿಗಿಂತ ಆಕೆಯ ನಗೆ ಸವಿಯಾಗಿತ್ತು. ಅವನು ಕಣ್ಣರಳಿಸಿದ.........ಕಾಫಿ ಕುಡಿದಾಯಿತು. ಇನ್ನು ಸುತ್ತಾಡಿ ಬರೋಣವೇ ಎಂದು, ಇಬ್ಬರೂ ಉಪ್ಪರಿಗೆಯಿಂದ ಇಳಿದು, ಟಾಂಗಾ ಹತ್ತಿ ಬೀಚಿನ ಕಡೆಗೆ ಹೋದರು.

ವಿಾರಾ ಉಸುಬಿನ ಮೇಲೆ ಕಾಲೆಳೆದುಕೊಂಡು ನಡೆದಳು. ಶಾಮ ಸುಂದರನಿಗೆ ಜತೆಗೂಡಿ, ಮೈಗೆ ಮೈತಾಗಿ, ಕೈಗೆ ಕೈಕೊಟ್ಟು ಕುಲುಕುಲು ನಡಿಗೆಯಲ್ಲಿ ನಡೆದಳು. ಇಬ್ಬರೂ ಮೈದಣಿಯೆ ಸುತ್ತಾಡಿದರು. ಆಕೆಗೆ ಏಕೊ ಏನೋ ಹೀಗೆ ಹೊಳೆಯಿತು ಮನಸಿಗೆ—'ನಾವು ಇಬ್ಬರೂ ಕೂಡಿ ಬೇರೆ ಯಾರೂ ಇಲ್ಲದ ಒಂದೆಡೆಯಲ್ಲಿ ಕುಳ್ಳಿರೋಣ!' ಎಂದು. ಆಕೆ ಜನ ಜಂಗುಳಿಯಿಲ್ಲದ ಕಡೆಗೆ ಗಂಡನನ್ನು ಎಳೆದಳು. ಶಾಮಸುಂದರನ ಮನವು ಜನ ಕಿಕ್ಕಿರಿದ ಕಡೆಗೇ ಒಲಿದಿತ್ತು. 'ಅಲ್ಲಿ ನೋಡು ಜನ ನೆರೆದಿದ್ದಾರೆ. ಆ ಕಡೆಗೇ ವಿನೋದವಾಗಿರೋಣ, ಬಾ!' ಎಂದು ಆಕೆಯ ಕೈಹಿಡಿದು ತೂಗಿದನು.

'ನಿಮಗೆ ಪಿಟ್ಟು ಊ ಬರುತ್ತದೆ ಮತ್ತೆ....ಚೆಲುಹುಡುಗೀನ ಕಟ್ಟಿಕೊಂಡಿದ್ದರೆ ಆಗುತ್ತಿಲ್ಲ. ನನ್ನ ಕುರೂಪನ್ನ ಅಲ್ಲೆಲ್ಲ ಮೆರಸಿ ಏನುಮಾಡಬೇಕೊಂತೀರಿ? ....ನನಗೆ ನಾಚಿಕೆಯಾಗುತ್ತದೆ........ನಾನು ಬರುವುದಿಲ್ಲ........'

'ಅಬ್ಬಬ್ಬಾ .......ಹುಡುಗಿ!............ನೀನು ಓದಿದ್ದು ಹಣ್ಣಿಗೆ ಬಂತು ನೋಡು?........ತಾನು ಚೆಂದಾಗಿದೆನೇಂತ ಹೇಳುವ ಬಗೆಯನ್ನು ಚೆನ್ನಾಗಿಯೇ ಅರಿಸಿರುವೆ. ಅಲ್ಲಿ ನಿನ್ನನ್ನು ನೋಡಿ ಎಲ್ಲಿ ಯಾರಾದರೂ ಕಣ್ಣು ಹಾಕಿ ಯಾರೆಂದು ತಿಳಿದಿದೇನು?'

'ಅಲ್ಲ ಮತ್ತೆ! ಈಗಿನ ಗಂಡಂದಿರು ತಮ್ಮ ಚೆಲುವೆಯರನ್ನ ಜೊತೇಲಿ ಕಟ್ಕೊಂಡು ದಿಬ್ಬಣ ಬರೋದೇಂದ್ರೆ ಬಹುಮಾನಾಂತ ತಿಳಕೊಂಡಿದ್ದಾರೆ. ನಾಚಿಗೇನೇನು ಮನೇಲಿ ಬಿಟ್ಟು ಬಂದಿದ್ದಾರೇಂತ ಕಾಣುತ್ತೆ! '........ನನಗೂ ಒಬ್ಬಾಕಿ ಚೆಲುವೆಯಾದ ಹುಡುಗಿ-ಹೆಂಡತಿ ಇದ್ದಾಳೆ'ಂಬುದನ್ನ ಎಗ್ಗಿಬಿಟೋ ಎಡ್ವರ್ಟೈಸ್‌ಮೆಂಟೋ ಮಾಡೋದಕ್ಕೇ ಇದ್ದಾರೇನೋ....ನೀವು ...'

'ಅಯ್ಯೋ, ಅಯ್ಯೋ ಇದೇನು ಮಾತು? ನನ್ನ ಬಂಗಾರ .......'

'ಸಾಕುಮಾಡಿ.... ...ಮನೆಯೊಳಗಿನ ಮಾತು ಬೀದಿಯಲ್ಲಿ ಬಿತ್ತ್ರೋದು ಬಂಗಾರ!....' ಶಾಮು ಮಿಾರ ನಡೆದ ಕಡೆಗೇ ಒಲಿದ.

ಇಳಿಹೊತ್ತು. ಕತ್ತಲೆ ಮುಸುಕುತ್ತ ಬಂತು. ಇಬ್ಬರೂ ಮನೆಗೆ ಮರಳಿದರು.

೨

ತಾಯಿ ಅನಸೂಯಾದೇವಿಯವರ ಕಡೆಯಿಂದ ಪತ್ರ ಬಂದಿತ್ತು. ಶಾಮು ಪತ್ರವನ್ನು ಒಡೆವಾಗಲೇ ಕಂದಿದ್ದ; ಓದಿದ ಮೇಲೆ ಕಪ್ಪಾದನು.

ಬಾಗಿಲ ಸಂದಿನಿಂದ ಮೀರಾ ಕೇಳಿದಳು: 'ಯಾರ ಪತ್ರ ಅದು?'

ಒಂದು ಭೂತದ್ದು ಅಂತ ತಿಳಿದು ಕೊ........ನೀನಗೇನು ಬಂದದ್ದು?'

'ನನಗೇನು ಬರುತ್ತೋ ಇಲ್ಲೋ ನೀವ್ಯಾಕೆ ಕಪ್ಪಾದ್ದಿರೀಂತ ತಿಳಿಯೋದಕ್ಕ ಬಂತು ಮಾತು. ಹೇಳಿದರೆ ಹೇಳಿ ನನಗೇನು?'

'ಏನಿಲ್ಲ!'

ಶಾಮು ಹಸಿದಿದ್ದನು. ಹಸಿವಿನ ಮಾತಿದೆಂದು ತಿಳಿದು ಆಕೆ ಕೇಳಿದಳು: 'ಏನಿಲ್ಲದಿದ್ದರೆ ಬಿಡಿ. ಹಸಿದು ಬಂದಿದ್ದೀರಲ್ಲ; ಉಂಡು ಕುಳ್ಳಿರಬಹುದು.... ಬನ್ನಿ....... ಬರಬಹುದಲ್ಲ?'

'ಇಗೋ ನಿನ್ನ ಅತ್ತೆ ಬರುತ್ತಾಳಂತೆ!........' ಎಂದು ಕುಗ್ಗಿದ ದನಿಯಲ್ಲಿ ಎದ್ದನು, ಪತ್ರವನ್ನು ಆಕೆಯ ಕೈಗೆ ದಾಟಿಸುತ್ತ.

ಆಕೆಯ ಕಣ್ಣುಗಳು ನಲಿದುವು. ಮನವೂ ನರ್ತಿಸಿತು. 'ಯಾವಾಗ ಬರುತ್ತಾರಂತೆ? ಎಂದು ಆಕೆ ಪತ್ರವನ್ನು ಓದತೊಡಗಿದಳು.

'ಬರಲಿ ಬಿಡು. ನನಗೆ ಹಸಿವಾಗ್ತದೆ—' ಎಂದು ಶಾಮು ಊಟಕ್ಕೆದ್ದನು.

ಆಕೆ ಮಾತು ತಿರುಗಿಸಿದಳು: 'ಬಂದರೇನು; ಚೆನ್ನಾಯ್ತು. ಅವರಿರುವಷ್ಟು ದಿನ ನಿಮ್ಮ ಹುಡುಗಾಟಿಕೆ ತುಸು ಹದಕ್ಕೆ ಬಂದೀತು ಅಷ್ಟೆ .......' ಎಂದು ಅವನ ಕೈಯನ್ನು ಮೆಲ್ಲನೆ ಚಿವುಟಿದಳು.

'ಸೊಕ್ಕಿದ್ದೀಯಲ್ಲ........ನೀನೂ ಊ' ಎಂದು ತುಟಿತುಟಿ ಕಚ್ಚಿಕೊಂಡು ಆಕೆಯ ಕೈಹಿಡಿದು ಮೆಲ್ಲನೆ ನೋಯಿಸಿದನು. ಮೀರಾ 'ಯ್ಯೋ!' ಎಂದಳು. ಶಾಮು ಸಂತವಿಸತೊಡಗಿದನು.

ಆಕೆ ಹೆಣ್ಣು. ಮನೆ ನಡೆಸುವ ಹೆಣ್ಣು—'ಊಟಕ್ಕೆ ಬನ್ನಿ........... ಮತ್ತೆ ಎಲ್ಲ!' ಎಂದಳು. 'ತಾಳು ಬರುತ್ತೇನೆ' ಎಂದು ಹೇಳಿ ಶಾಮು ತಿರಿಗಿ ಕುರ್ಚಿಯಲ್ಲಿ ಕುಳಿತುಕೊಂಡನು. ಮೀರಾ ಆಚೆಯ ಕೋಣೆಗೆ ಹೋದಳು.

ಹತ್ತು ನಿಮಿಷಗಳು ದಾಟಿದುವು.

ಆಕೆ ತಿರಿಗಿ ಬಂದು ಗಂಡನನ್ನು ಊಟಕ್ಕೆ ಕರೆದಳು.

ಶಾಮು ವೃತ್ತಪತ್ರಿಕೆಯೊಂದನ್ನು ಓದುವ ನೆವಮಾಡಿ ಏನೋ ಯೋಚಿಸುತ್ತಿದ್ದನು.

'ಊಟಕ್ಕೆ ಬನ್ನೀ........ಹೂಂ...'

'ಹುಂ!'

ಹೊತ್ತು ದಾಟುತ್ತಲೇ ಇತ್ತು. ವಿಶಾರ ಇನ್ನೂ ಅಲ್ಲೇ ನಿಂತಿದ್ದಳು. ಬಾಗಿಲ ಸಂದಿಗೊರಗಿ ಶಾಮು ಏಳುವಂತಿರಲಿಲ್ಲ. ಆಕೆಗೆ ಬೇಸರು ಹುಟ್ಟಿತು. ಅವನ ಬಳಿಗೆ ಕೆರಳಿದವಳಂತೆ ಬಿರುಸಾಗಿ ಹೋಗಿ ಕೈಯಲ್ಲಿದ್ದ ಪತ್ರಿಕೆಯನ್ನು ಸೆಳೆದುಕೊಂಡಳು. 'ನನಗೂ ಹಸಿವಾಗ್ತದೆ........ಬನ್ನಿ ಗಂಟೆ ಹತ್ತಾಯ್ತು....' ಎಂದು ಎಚ್ಚರಿಸಿ ಹೇಳಿದಳು.

'ಬರುತ್ತೇನೆ. ಈ ಒಂದು ಭಾಷಣ ಓದಿಬಿಡುತ್ತೇನೆ....'

ಶಾಮು ತಿರುಗಿ ಓದತೊಡಗಿದನು—ತನ್ನ ಮನದ ಬಗೆಯನ್ನು ಓದುತ್ತಿರಬೇಕು.

ಗಡಿಯಾರ ೧೦॥ ಬಾರಿಸಿತು.

'ನನಗೆ ಹಸಿವಾಗ್ತದೆ ಏಳೀ s s s'

ಅವನಿಗೆ ಸಿಟ್ಟು ಬಂದಿರಬೇಕು. ಅವನು ಸೆಡವಿನಿಂದ ಮೊಗದಿರುವಿ ಆಕೆಯನ್ನೊಮ್ಮೆ ದುರದುರನೆ ನೋಡಿದನಷ್ಟೆ. ತಿರುಗಿ ಓದತೊಡಗಿದನು.

'ಬನ್ನೀ ಎಂದರೆ?' ಕುಗ್ಗಿದ ದನಿಯಲ್ಲಿ.

'ನಿನಗೆ ಹಸಿವಾದರೆ ಹೋಗಿ ಉಣ್ಣು. ನಾನೇಕೆ ಬರಬೇಕು? ನನಗೆ ಹಸಿವಿಲ್ಲ. ಒಂದಿಷ್ಟು ಹಾಲು ತಾ' ಎಂದನು ತುಸು ಗಟ್ಟಿಯಾಗಿ.

'ಹೀಗೇಕ್ಮಾಡುತ್ತೀರಿ?'

'ನೀನು ಹೋಗಿ ಊಟಮಾಡು ಅಂದೆನಲ್ಲ?'

'ನೀವೂ ಬನ್ನಿ.'

'ನನಗೆ ಹಸಿವಾಗುವುದಿಲ್ಲ.'

'ವಿಶಾರ ಒಳಗೆ ಬಡಿಸಿಟ್ಟುದನ್ನು ಹಾಗೇ ಪಾತ್ರಕ್ಕೆ ಸುರುವಿ ಮುಚ್ಚಿಟ್ಟಳೆ. ಒಂದಿಷ್ಟು ಹಾಲನ್ನು ತನಗೆ ವಿಶಾಸಲು ಇಟ್ಟು ಮತ್ತೊಂದು ಲೋಟ ತುಂಬ ಹಾಲು ಗಂಡನಿಗೆ ತಂದಿಟ್ಟಳು.

ಅವನು ಓದುತ್ತಿದ್ದನು.

'ಹಾಲೂ ಊ!'

'ನಿಲ್ಲು' ಎನ್ನುವಂತೆ ತಲೆಯಲ್ಲಾಡಿಸಿದನು.

'ಹಾಲು ಕುಡೀರೀ........'

ಅವನು ನಿದ್ದೆಯಿಂದ ಎಚ್ಚತ್ತವನಂತೆ—'ಎಲ್ಲಿ?....ತಾ....ನೀನು ಕುಡಿಯ ಲಿಲ್ಲೇಕೆ?....ಕುಡಿ ಇದರಿಂದ ಸ್ವಲ್ಪ....'ಎಂದನು.

'ನನಗೆ ಇಟ್ಟಿದ್ದೇನೆ ಒಳಗೆ'

'ಕುಡೀ ಅನ್ನುವಾಗ—'

'ನೀವು ಕುಡೀರಿ. ನನಗೆ ಒಳಗಿಟ್ಟಿದ್ದೇನೆ....' ಎಂದು ಆಚೆಯ ಕೋಣೆಗೆ ಹೋದಳು. ತನ್ನ ಹಾಲನ್ನು—ಒಂದು ಗುಟುಕಾದರೂ ಇತ್ತೋ ಇಲ್ಲೋ—ಕುಡಿದು ಹೊರಗೆಬಂದಳು.

ಶಾಮು ಇನ್ನೂ ಓದುತ್ತಲೇ ಇದ್ದನು. ಹಾಲು ಹಾಗೇ ಇತ್ತು.

ವಿಶಾರ ಹೊತ್ತಾಯ್ತೆಂದು ಹಾಸಿಗೆಯನ್ನೆಲ್ಲ ಹಾಸಿ ತಯಾರುಮಾಡಿದಳು. 'ಹೊತ್ತಾಯ್ತು. ಹಾಲು ಕುಡಿದು ಏಳೀ....' ಎಂದಳು. ಶಾಮು 'ನೀನು ಹೋಗು ಮಲಕ್ಕೋ' ಎಂದು ಉದಾಸೀನಗೊಂಡು ನುಡಿದನು. ವಿಶಾರ ಅಲ್ಲೇ ಕೂತಳು.

ಈಗಲೂ ವಿಶಾರ ಹೆಚ್ಚು ಹೊತ್ತು ಕಾದಳು. ನಿದ್ದೆ ತೂಗಹತ್ತಿತು. ಕುಳಿತಲ್ಲಿಯೇ ತುಸು ನಿದ್ದೆ ತೂಗಿದಳು. ಮತ್ತೆ ಹೋಗಿ ಮಲಗಿದಳು.

ಗಡಿಯಾರ ಎರಡು ಗಂಟೆಯನ್ನು ಬಾರಿಸಿತು.

ಹೊತ್ತು ಯಾರಿಗಾಗಿ ತಳುವಿದ್ದುಂಟು? ಶಾಮು ಮರುದಿನ ಕಚೇರಿಗೆ ಹೋಗಲಿದೆ ಎಂದು ಎಚ್ಚರಾದಾಗ ಗಂಟೆ ಮೂರನ್ನು ದಾಟಿತ್ತು. ತಾನೂ ಮಲಗಿಕೊಂಡನು.

ಮರುದಿನ ಸಂಜೆಗೆ ಅನುಸೂಯಾದೇವಿಯವರು ಬಂದರು.

ಶಾಮು ಮನೆಯಲ್ಲಿ ಇರಲಿಲ್ಲ.

'ಸಂಜೆ ಹೊತ್ತಾಗ್ತೇನು ಅವ ಬರುವಾಗ?' ಎಂದು ಅವರು ಸೊಸೆಯನ್ನು ಕೇಳಿದರು. ಆಕೆ 'ಬೇಗ ಬರ್ತಾರೆ. ಇವತ್ತೇನೋ ಕೆಲಸದಲ್ಲ ಬಿದ್ದಿರಬೇಕು ತುಂಬಾ' ಎಂದಳು.

ಬಹಳ ಹೊತ್ತಾದ ಮೇಲೂ ಶಾಮು ಬರಲಿಲ್ಲ.

ವಿಶಾರ ಕಾಫಿ ತಯಾರಿಸಿ ಅತ್ತೆಗೂ ಕೊಟ್ಟು ತಾನೂ ಕುಡಿದಳು.

ಇಬ್ಬರೂ ಮಾತಿಗೆ ಶುರುಮಾಡಿದರು.

'ಶಾಮು ಕೆಲಸಕ್ಕೆ ಹೋಗುವ ಕಚೇರಿ ದೂರ ಅದೆಯೇನು?'

'ಟ್ರಾಮಿನಲ್ಲಿ ಹೋಗಬೇಕು ಸುಮಾರು ಮೂರು ನಾಲ್ಕು ಫರ್ಲಾಂಗು ದೂರ............'

'ದಿನಾಲೂ ಟ್ರಾಮೂ?'

'ಹೊತ್ತಿಗೆ ಹೋಗಿ ಮುಟ್ಟಬೇಡವೆ ಅಲ್ಲಿ?'

'ನೋಡು ಮಗೂ, ಅವನಿಗೆ ಒಂದು ಕಾಗದ ಬರೆಯೋದಕ್ಕೂ ಒಂದಿಷ್ಟು ಬಿಡುವಿಲ್ಲ ಎಂತಾನೆ. ಮುಂಜಾವಿಗೆ ಎದ್ದು ಹೋದರೆ ಬೈಗು ಇಳಿದ ಮೇಲೆ ಬರುತ್ತಾನಂತೆ. ಹೆತ್ತವರುಳು, ಆಗಾಗ ಬಂದು ನೋಡೋದ ಕ್ಕಾಗತ್ಯೇ? ಒಂದು ಕಾಗದ ತಪ್ಪದೆ ಬರೀ ಅಂದರೆ ಈ ಕೆಲಸದ ತುರಾ ತುರಿ ..............ತಾಯಾದರೇನು? ಸಾಕಿ ಸಲಹಿ ಬೆಳೆಸಿದ್ದಾಯ್ತು........ ಈಗ ನಾ ಮುಪ್ಪು ತಾಳಿದ್ದೇನೆ. ನನ್ನಿಂದ ಇನ್ನೇನಾಗಬೇಕು ಹೇಳು........ಇದ್ದಲ್ಲ; ಹೇಗೂ ಕಷ್ಟಪಟ್ಟು ವಿದ್ಯೆಬುದ್ಧಿ ಕಲಿಸಿ ದೊಡ್ಡದು ಮಾಡಿದೆ. ತಾಯಾದಾಕೆಗೆ ತನ್ನ ಮಗ ಚೆನ್ನಾಗಬೇಕೆಂದು ಯಾವಾಗಲೂ ಆಸೆ ಇದ್ದದ್ದೆ........ಈ ಮಗ ನನ್ನ ಕಣ್ಣನೀರು ಉಣ್ಸಿದ. ಆದರದ ನನಗೆ ಅವನ ಮೇಲಿನ ಪ್ರೇಮ ಏನೂ ಕಡಿಮೆಯಾಗಿಲ್ಲವ್ಮ. ಅವನೇನೆಂದರೂ ನಾನೇ ಹೆತ್ತ ಮಗನಲ್ಲವೆ?........ ಅವರು ಹೋಗಿ ಇಪ್ಪತ್ತು ವರ್ಷಗಳಾದುವು. ಈ ಮಗನ ಮೋರೆ ನಾನು ಅವರನ್ನು ಮರೆತಿದ್ದೇನೆ. ಇವನ ಕಂಡರೆ ಅವರ ರೂಪು ನನ್ನ ಕಣ್ಣೆದಿರು ನಿಂತ್ಹಾಂಗಾಗ್ತದೆ........' ಎಂದು ಅವರು ತಾಯ್ತನದ ಸೀಮೆಯನ್ನು ಬಣ್ಣಿ ಸಿದರು. ಅವರ ಕಣ್ಣಿನಲ್ಲಿ ತೊಟ್ಟು ನೀರು ಹರಿದಿತ್ತು.

ಮೀರ ಇನ್ನೂ ಹದಿನೆಂಟು ತುಂಬದ ಹೆಣ್ಣು ಆಕೆಯದೂ ಹೆಂಗ ರುಳು. ಹೆಣ್ಣಿನ ಮನದ ಏರಿಳಿತವನ್ನು ಹೆಣ್ಣೇ ಚೆನ್ನಾಗಿ ಗುರುತಿಸಬಲ್ಲುದು. ಆಕೆಗೂ ಅತ್ತೆಯ ಕೊರಗು ತಟ್ಟದಿಲ್ಲ. ಅದು ಆಕೆಯ ಮನಕ್ಕೆ ತಾಕಿತು.

'ನನ್ನ ಮಗಳು ಬಾ ಎಂದು ಕರೆದು ನನಗೆ ಅನ್ನ ಹಾಕ್ತಾಳೆ' ನೋಡವ್ಮ. ಅವಳನ್ನು ಸಾಲೆಗೆ ಕಳಿಸಿಲ್ಲ. ಇವನ ಓದಿಗೆ ತುಂಬಿದಷ್ಟು ಹಣ ಆಕೆಗೆ ಕೊಟ್ಟಿಲ್ಲ. ನಿಮ್ಮ ಮದುವೆ ಬಹಳ ಸಂಭ್ರಮದಿಂದ ನಡೆಸೀತೆಂತ ಆಕೆಯ ಮದುವೆಗೆ ಅಂತಹ ಆಡಂಬರವೇನೂ ಮಾಡಿಲ್ಲ........ಆದ್ರೂ ಆಕೆಗೆ ತಾಯೀ ಎನ್ನುವ ಮಮತೆ ಉಂಟು, ನೋಡು!...............ಈ ಮಗನಿದ್ದು, ನಾನು ಹೆತ್ತು ಹೊತ್ತು ಸಲಹಿದ ಪುಣ್ಯ ಬರಲಿಲ್ಲ........ಅವ ನನಗೆ ತಿಂಗಳಿಗೊಂದಾ

ದರೂ ಕಾರ್ಡು ಬರೆದು ಹಾಕಬಹುದಿತ್ತು....' ಅಳು ಉಕ್ಕಿ ಬರುತ್ತಿತ್ತು. ಆದರೆ ಹೆತ್ತ ಕರುಳಲ್ಲವೇ ಅದು? ಇಷ್ಟು ದೊಡ್ಡದಾಗಿ ಬಳೆಸುವ ಸೈರಣೆಯಿದ್ದ ತಾಯಿಗೆ ಇಂತಹ ಸಣ್ಣ ತಪ್ಪನ್ನು ಮನ್ನಿಸುವ ಎದೆ ಇರಲಾರದೇ? ಅವರು ತಡೆದುಕೊಂಡರು.

ಮಿಾರ ಹೇಳಿದಳು: 'ಅಯ್ಯೋ, ಹಾಗನ್ನಬೇಡಿ ಅತ್ತೆಮ್ಮ!........ನಿಮ್ಮ ಕಾಗದ ಬಂದಾಗಲೆಲ್ಲ ಅವರು ನನಗೆ ತೋರಿಸುತ್ತಾರೆ....ಆಗಲೇ ಬರೆದುಹಾಕಿ ರೆಂದು ನಾನು ಹೇಳುತ್ತೇನೆ. ಬರೆದಿದ್ದೇನೆಂದೇ ಹೇಳುವರು. ತಿಂಗಳಾಗುವಾಗ ಸಂಬಳದಿಂದ ರೂ. ೨೦ನ್ನು ಕಳಿಸಿದ್ದೇನೆಂದು ಹೇಳುತ್ತಾರೆ. ಸಂಬಳವಾಗುವ ಹೊತ್ತಿಗೆ ನಾನೂ ನೆನಪು ಹುಟ್ಟಿಸುತ್ತೇನೆ........'

ಆ ತಾಯಿ ಕಣ್ಣು ಬಿಟ್ಟು ನೋಡಿದರು; ಕಿವಿಕೊಟ್ಟು ಕೇಳಿದರು.

ಅವರು ಮತ್ತೆ ಹೇಳಿದರು: 'ನೀನೂ ಅವನ ಕೂಡಿದವಳಮ್ಮ. ಆದರೂ ಕೇಳು, ನಿನ್ನ ಗಂಡ ತಿಂಗಳು ತಿಂಗಳು ಇಪ್ಪತ್ತು ರೂಪಾಯಿ ಕಳಿಸುವಲ್ಲಿ ಬರೀ ಹತ್ತು ಕಾಸು ಕಳಿಸಿದ್ದಾನೆಯೋ ಕೇಳು—'

ಅನುಸೂಯಾದೇವಿಯವರಿಗೆ ಇದರ ಒಳಗೇನೆಂದು ತಿಳಿಯಲಿಲ್ಲ. ಮಿಾರೆಗೂ ಸಂಶಯವಾಯಿತು. ಅವಳು ಒಳಗೋಡಿದಳು. ಗಂಡನ ಡೈರಿ ತೆಗೆದು ನೋಡಿದಳು. ಪ್ರತಿ ತಿಂಗಳು ೫ನೇ ತಾರೀಕಿನ ದಿನ ತಪ್ಪಿದಲ್ಲಿ ಮಾರನೆಯ ದಿನ ರೂ. ೨೦ನ್ನು ಮ. ಆ. ಮಾಡಿ ಕಳಿಸಿದ್ದು ಬರೆದಿತ್ತು— ಅತ್ತೆಯ ಹೆಸರಲ್ಲಿ! ಇಬ್ಬರೂ ಪಕಪಕನೆ ಒಬ್ಬರನ್ನೊಬ್ಬರು ನೋಡಿಕೊಂಡರು. ಮಿಾರೆಗೆ ಈ ಸುದ್ದಿ ಕೇಳಿ ತಲೆ ಸುತ್ತಲಾರಂಭಿಸಿತು.

'ಮತ್ತೆಷ್ಟು ಹೊತ್ತಾಗುತ್ತೋ ಮಿಾರ?' ಅನುಸೂಯಾದೇವಿಯವರು ಮಾತಿನ ದಾರಿ ಬದಲಾಯಿಸಿದರು. ಮಿಾರ ಹೇಳಿದಳು: 'ಇವತ್ತೇನೋ ತಡ ಮಾಡಿದ್ದಾರೆ. ಯಾವಾಗಲೂ ೫॥ ಗಂಟೆಗೇ ಬರುವ ಟ್ರಾಮಿನಲ್ಲಿ ಬರುತ್ತಾರೆ ತಪ್ಪಿದರೆ ಇನ್ನೊಂದು ೫ ಮಿನಿಟಿನಲ್ಲಿ ಬರುವುದಿದೆ ಅದರಲ್ಲಿ........'

ಇಷ್ಟು ಮಾತಾಗುವಾಗ ಮಿಾರನ ಮನವು ಎಲ್ಲಿಯೋ ಅಲೆಯ ಹೊರಟಿತ್ತು. ಆಕೆ ಎಣಿಕೆ ಹಾಕಿದಳು, ನೂಕಿದಳು. ಆದರೆ ಒಂದು ವಿಷಯ ಹೊಳೆಯಿತು. ಇವರು, ತನ್ನನ್ನು ಸಾಕಿ ಮುದ್ದಿಸಿ ತಿದ್ದಿ ಸಲಹಿದ ತಾಯಿ ಇವತ್ತು ಬರುತ್ತಿದ್ದಾರೆಂಬುದನ್ನು ಅರಿತೇ ಇಷ್ಟು ಹೊತ್ತು ಮಾಡಿ ಕೊಂಡು ಇರಬೇಕು........ತಾಯಿಯ ಕಾಗದ ಬಂದಂದಿನಿಂದ ಅವರೇಕೆ

ಕಳೆ ಕೆಟ್ಟಿರಬೇಕು ಮತ್ತೆ?........ಎಂತಹ ಎದೆಯಿಲ್ಲದ ಕಟುಕ ಜಾತಿಯ ಗಂಡಸರು!........ಆಕೆ ನಿಟ್ಟುಸಿರುಗರೆದಳು.

'ಅನುಸೂಯಾದೇವಿಯವರು ಬರಿ ಮನಸಿಂದ ಹೊರನೋಡಿದರು. ತಲೆಯಿಂದ ತಲೆಯವರೆಗೆ ಎಲ್ಲೂ ಒಂದು ಗಿಡಮರದ ತಲೆಕಾಣಸಿಗಲಿಲ್ಲ. ಎಲ್ಲ ತಾನೇ ತಾನೆಂದು ಎದ್ದು ನಿಂತಿರುವ ಎತ್ತರದ ಏಳುಪ್ಪರಿಗೆಯ ಮನೆಗಳೇ! ಯಾಕೆ ಬಂದೇನೋಪ್ಪ ಎಂಬ ಬೇಸರೂ ಅವರನ್ನು ಆವರಿಸಿತ್ತು. ಪಾಪ, ಮಗಳಿಗೆ ಒಬ್ಬ ೧೦-೧೨ ತಿಂಗಳ ಸಣ್ಣ ಹುಡುಗನಿದ್ದಾನೆ. ಅವನೀಗ ಏನು ಮಾಡುತ್ತಿದ್ದಾನೋ ಎಂದು ಮನ ದೂರದ ಹಳ್ಳಿಯ ಕಡೆಗೆ ಸಾಗುತ್ತಿತ್ತು. ತಿರುಗಿ ಬರುತ್ತ 'ನನ್ನ ಮಗನು ಇನ್ನೂ ಏಕೆ ಬರಲಿಲ್ಲ?' ಎಂದು ಎಣಿಸುತಿತ್ತು.

ಅವರು ನಿಟುನೀಳಾದೊಂದು ಉಸಿರುಗರೆದುಚ್ಚರಿಸಿದರು. 'ಒಂದೇ ಒಂದು ಕಾಗದ ಬರೆದಿದ್ದರೆ, ನನ್ನ ಬೆಂದೊಡಲು ತಣ್ಣಗಾಗುತಿತ್ತು!........'

ಮೀರ ಉತ್ತರ ಕೊಡಲಿಲ್ಲ. ಅತ್ತೆಯೆಂದ ಈ ಮಾತು ಈಟಿಯಂತೆ ಮನಕ್ಕೆ ಚೆನ್ನಾಗಿ ನಾಟಿತು. ಅವಳೆಣಿಸಿದಳು: 'ಅತ್ತೆ ಏನು ಎಣಿಸಿದ್ದಾರೆಯೋ!........' ಒಂದು ಸಂದೇಹವೂ ಹುಟ್ಟಿತು. 'ನಾನು ಎಲ್ಲಾದರೂ ಬೆಡಗಿನ ಹೆಣ್ಣು ಹೇಳಿಕೊಟ್ಟು ಯಕ್ಷಿಣಿ ವಿದ್ಯೆ ಆಡಿದ್ದೇನೆಂದು ತಿಳಿದುಕೊಳ್ಳುತ್ತಾರೋ ಏನೋ!........' ನಿಜಕ್ಕೂ ಆಕೆಗೇನು ಗೊತ್ತು?

ಮೀರ ತೌರಿಗೆ ಹೋಗದೆ ಬಹಳ ಕಾಲವಾಗಿತ್ತು. ಆಕೆಯ ತಂದೆ ಐದಾರು ಕಾಗದ ಬರೆದಿದ್ದರು: 'ಕೆಲವು ದಿನ ಇಲ್ಲಿ ಇದ್ದು ಬಿಡಲಿ. ಆಮೇಲೆ ಬರುವಳಂತೆ. ಈಗ ರಜೆ ಸಿಗಲೊಲ್ಲದು' ಎಂದು ಶಾಮಸುಂದರ ಬರೆದಿದ್ದನು. ಮೀರ ಚಿಂತಿಸಿದಳು. 'ತನ್ನ ಸ್ವಂತ ತಾಯಿಯನ್ನು ನೋಡದ ಮನುಷ್ಯ ಮತ್ತೆ ನನ್ನನ್ನು ಬಿಡುತ್ತಾರೆ ಏಕೆ?........' ಎಂದು ತನ್ನ ತಂದೆತಾಯಿಗಳನ್ನು ನೆನೆದುಕೊಂಡಳು. ಎರಡು ತೊಟ್ಟು ಕಂಬನಿ ಇಳಿಸಿದಳು. ಅನುಸೂಯಾದೇವಿಯವರು ತನ್ನ ದುರದೃಷ್ಟವನ್ನು ಅಷ್ಟೇ ನೆನೆದುಕೊಂಡರು. ಮೀರಾ ಅಳುವುದನ್ನು ಕಂಡು ಆ ತಾಯಿ ತನ್ನದನ್ನು ಒತ್ತಿಟ್ಟು ಸೊಸೆಯನ್ನು ಸಂತೈಸಿದಳು.

೪

ಒಂಭತ್ತು ಗಂಟೆಗೆ ಶಾಮು ಉಪ್ಪರಿಗೆ ಏರಿ ಬಂದನು. ನೆಟ್ಟಗೆ ತನ್ನ ಕೋಣೆಗೆ ಹೋಗಿ ಚಲ್ಲಣಗಳನ್ನು ಕಳಚಿಹಾಕಿ, ಒದಲು ಉಟ್ಟುಕೊಂಡನು.

ವಿಮಾರ ಒಳಗೆ ಬಂದಳು.

ಶಾಮು ಮಾತನಾಡಲಿಲ್ಲ. ಒಂದು ಕುರ್ಚಿಯಲ್ಲಿ ಕುಳಿತುಕೊಂಡು ಪೇಪರ್ ಓದುವುದಕ್ಕೆ ತೊಡಗಿದನು. ವಿಮಾರ ಹೇಳಿದಳು ಮತ್ತೆ: 'ತಾಯಮ್ಮ ಬಂದಿದ್ದಾರೆ ನಿಮ್ಮ'. ಶಾಮು ಅದನ್ನು ಕೇಳಿದನೋ ಇಲ್ಲವೋ.

ವಿಮಾರ ಈಚೆಗೆ ಬಂದಳು.

ಅನುಸೂಯಾದೇವಿಯವರು ಒಂದು ಮೂಲೆಗೆ ಕುಳಿತಿದ್ದರು.

ತುಸ ಹೊತ್ತಿನಮೇಲೆ ಶಾಮು ಸ್ನಾನಕ್ಕೆದ್ದನು. ಅತ್ತೆ ಸೊಸೆಯರು ಹೊರಗಿನ ಕೋಣೆಗೆ ಬಂದು ಕುಳಿತರು. ಆಗಲೂ ನೋಡಿ ಶಾಮು ಮಾತನಾಡಲಿಲ್ಲ. ಒಟ್ಟಿನಲ್ಲಿ ಇರುವ ಎರಡು ಕೋಣೆಗಳಲ್ಲಿ ಆಚೀಚೆ ಹೋಗುವಾಗಲೂ ಕಾಣುವುದಿಲ್ಲವೇ? ಕಂಡೂ ಕಾಣದೆ ಇದ್ದನಾತ. ತಿರುಗಿ ಅವನು ಹೊರಗಿನ ಕೋಣೆಯಲ್ಲಿಯೇ ಹೋಗಿ ಕುಳಿತನು. ಅಲ್ಲಿಂದವರು ತಿರುಗಿ ಒಳಗೆ ಬಂದು ಕುಳಿತರು.

ತುಸು ಹೊತ್ತಾಯಿತು.

ವಿಮಾರ ಎದ್ದಳು: 'ಊಟಕ್ಕೆ ಬನ್ನಿ, ತಾಯಿಯವರೂ ಕಾಯುತ್ತಾ ಇದ್ದಾರೆ.'

'ನನಗೆ ಹಸಿವು ಇಲ್ಲ. ನೀವಿಬ್ಬರೂ ಉಂಡು ಮಲಗಿ. ನನಗೇನೂ ಬೇಕಾಗಿಲ್ಲ ಈಗ.'

ಇನ್ನೂ ಒಂದು ಗಳಿಗೆ ಕಾದಳು.

ಶಾಮು ಏಳಲಿಲ್ಲ.

ವಿಮಾರ, 'ಬನ್ನಿ ಹಸಿವಾಗ್ತದೆ. ಮೂವರೂ ಒಟ್ಟಿಗೆ ಉಣಬಹುದಲ್ಲ' ಎಂದು ಆಸೆಯಿಂದ ನುಡಿದಳು. ಶಾಮು ಸಿಟ್ಟಾದನು. 'ನೀನು ಹೋಗುತ್ತಿಯಾ ಇಲ್ಲೇನು?........ಹೇಳಿದರೆ ತಿಳಿಯಬೇಕು, ಗೊತ್ತಾಯ್ತಲ್ಲೊ?........'

ವಿಮಾರ ಅತ್ತೆಯ ಬಳಿಗೆ ಬಂದು 'ನೀವುಣ್ಣೀ, ಅವರಿಗೆ ಇವತ್ತೇನೋ ಹಸಿವಾಗದಂತೆ........' ಎಂದಳು.

ಅನುಸೂಯಾದೇವಿಯವರ ಎದೆಗೆ ಅಲಗು ನಾಟಿದಂತೆ ಆಯಿತು. 'ನೀನು ಉಣ್ಣುವುದಿಲ್ಲೇನು, ತಾಯೀ?' ಎಂದು ಸೊಸೆಯನ್ನು ಕೇಳಿದರು. ವಿಮಾರ, ತಾನು ಮತ್ತೆ ಉಣ್ಣುವಳೆಂದು ಅರುಹಿದಳು. ಆ ತಾಯಿ ಮಗನನ್ನು ತಾನೇ ಹೋಗಿ ಕೇಳಿದಳು. ಶಾಮು ನಿಷ್ಠುರನಾಗಿದ್ದ—'ನಿನಗೆ ಯಾರು ಹೇಳಿ

ದರವ್ಮ್ಮ ಇಲ್ಲಿ ಬರೋದ್ಕೆ? ಅವಳಿಗೆ ಹೇಳಿದೆನಿಲ್ಲೋ ನಾ ಉಣ್ಣುವದಿಲ್ಲಾಂತ?' ಎಂದು ಗದರಿಸಿದ. ಮಗನ ಆ ಮಾತು ಕೇಳಿ ಆ ತಾಯಿಗೆ ಉಂಡ ಹಾಗೇ ಆಯಿತು. ಅವರು ಮತ್ತೆ ಉಣಲಿಲ್ಲ.

ಮೀರ ಅತ್ತೆಗೆ ಹಾಸಿಗೆ ತಯಾರು ಮಾಡಿದಳು. ಮುದುಕಿ ಹೋಗಿ ಮಲಗಿದಳು. ಮೀರ ಅಳುತ್ತ ಕುಳಿತುಕೊಂಡಳು. ಅಂದು ರಾತ್ರಿ ಯಾರೂ ಉಣ್ಣಲಿಲ್ಲ'............

ಮಾರನೆಯ ದಿನದ ನಸುಕಿನಲ್ಲಿ ಎದ್ದಾಗ ಶಾಮನ ಮೊಗದಲ್ಲಿ ಒಂದು ಬಗೆಯ ಮುಸಕು ಮುಚ್ಚಿತ್ತು. ಮೀರೆಯ ಮೋರೆಯಲ್ಲಿ ದುಕ್ಕದ ಹೊರೆ ಹೇರಿತ್ತು. ಅನುಸೂಯಾದೇವಿಯವರು ಕಂಗಾಲಾಗಿದ್ದರು. ಶಾಮು ಇದೆಲ್ಲ ಅರಿತನು.

'ಏನು ಮೀರಾ, ಅಳುತ್ತೀಯೇಕೆ?' ಎಂದು ಕೇಳಿದನು.

ಆಕೆಗೆ ದುಃಖ ಉಕ್ಕಿಬಂತು. 'ಅಮ್ಮನ ನೆನಪಾಯ್ತು. ನಾನು ಊರಿಗೆ ಹೋಗಬೇಕು. ಬಹಳ ಕಾಲವಾಯ್ತು' ಎಂದು ಅಳಲು ಮೊದಲು ಮಾಡಿದಳು.

ಶಾಮನ ಮನವು ಸಿಕ್ಕಿನಲ್ಲಿ ಬಿದ್ದುಕೊಂಡಿತು. ಇವತ್ತು ಅನುಸೂಯಾ ದೇವಿಯವರು ಅಲ್ಲಿ ಬಂದು ಇರದೆ ಇದ್ದರೆ, ಮೀರೆಯನ್ನೆಂತೋ ಮುದ್ದಿಸಿ ತಿದ್ದುತ್ತಿದ್ದನು; ಆಗದೆ ಹೋದರೆ ಕಾಲಿಗೆ ಅಡ್ಡ ಬೀಳುವುದಕ್ಕೂ ಹಿಂಜರಿಯು ತ್ತಿರಲಿಲ್ಲ. ಆದರೆ ಅಷ್ಟು ಮುಂದಾಗುವುದಕ್ಕೆ ಆ ತಾಯಿ ತಡೆಯಾಗಿದ್ದಳು. ಅವನು ಇಷ್ಟೇ ಅಂದ: 'ಬರಿಯ ನಾಲ್ಕೇ ದಿನ ಇದ್ದು ಮತ್ತೆ ಹೋಗಬಹುದು ಮೀರ. ನಿನ್ನ ಅತ್ತೆಮ್ಮನ್ನವರು ಕೂಡಾ ಇದ್ದಾರೆ ನೋಡು............' ಎಂದು ಸಕ್ಕರೆಯಿಂದ ಮಾತನಾಡಿದನು.

ಅತ್ತೆ ಇರುವುದರಿಂದ ತಾನಿರಬೇಕು ಎಂಬ ಮಾತು ಆಕೆಗೆ ಹಿಡಿಸಿತು. ಆದರೆ ಅವರನ್ನು ಬರಮಾಡಿಕೊಂಡ ರೀತಿ ಅವಳಿಗೆ ಹಿಡಿಸಿರಲಿಲ್ಲ. ಅವ ಳೆಂದಳು: 'ನನ್ನ ಅತ್ತೆ ಎಂದರೆ ನಿಮಗೆ ತಾಯಿ ತಾನೇ? ಅವರನ್ನು ಕಂಡು ಮಾತನಾಡಿದಿರೇನು ನೀವು?........ಇಲ್ಲಿರಲು ನನಗೆ ಹಿತವೆನಿಸುವುದಿಲ್ಲ........' ಎಂದು ತಣ್ಣೀರೆರಚಿಬಿಟ್ಟಳು ಗಂಡನ ಮೋರೆಗೇ.

'ನಾಲ್ಕುದಿನ ಇರವ್ಮಾ!' ಎಂದು ಅತ್ತೆಯೂ ಹೇಳಿದರು.

'ನಾನಿವತ್ತೇ ಹೋಗಬೇಕು.' ಎಂದು ಆಕೆ ನಿಶ್ಚಯ ಹೇಳಿದಳು.

ಶಾಮು ಬೇರೇನೋ ಹೇಳಬೇಕೆಂದಿದ್ದನು. ಅದನ್ನು ಬಿಟ್ಟು 'ನಾನು ಯಾವುದಕ್ಕೂ ಸಂಜೆಗೆ ಬರುತ್ತೇನೆ. ಆಗ ಯೋಚಿಸಬಹುದು' ಎಂದನು.

ಮಾರ ಅವನಿಗೆ ಮಾತು ಸಲ್ಲಿಸಿದಳು: 'ಯಾಕೆ ಇಲ್ಲಿರಬೇಕು ಹೇಳಿ. ಮಧ್ಯಾಹ್ನ ಹೋಟೇಲ ಅನ್ನ ಉಣ್ಣುವಾಗ ನಿಮಗೆ ಹಸಿವಾಗ್ತದೆ ಅಲ್ಲವೇನು? ಸಂಜೆ ರೂಮಿಗೆ ಬಂದು ಇಲ್ಲಿ ಒಟ್ಟಿಗೆ ಉಣ್ಣುವಾ ಎಂದರೆ ನಿಮಗೆ ಹಸಿವಾಗುವುದಿಲ್ಲ........ನೀವು ಯಾರ ಮೇಲಿನ ಸಿಟ್ಟಿನಿಂದ ಉಪವಾಸ ಬೀಳುತ್ತೀರಿ?.... ನೀವು ಉಪವಾಸ ಬೀಳುವಾಗ ನಾನು ಉಂಡು ಮಲಗಬೇಕಂತೀರೇನು?........ ನಾನು ಮನೆಗೇ ಹೋಗಿದ್ದುಬಿಟ್ಟರೆ ಮತ್ತೆ ನೀವು ಹೇಗೆ ಬೇಕು ಹಾಗೆ ಇರ್ರಿ.....

ಶಾಮು ಮಾತನಾಡದೆ ಮೊಗ ತೊಳೆದನು. ಅಂಗಿಯನ್ನು ಹಾಕಿಕೊಂಡು ಕಚೇರಿಗೆ ಹೋಗಲು ಹೊರಟನು. 'ನೀನು ತಾಯಿಗೆ ಕಾಫಿ ಮಾಡಿ ಕೊಡು; ನೀನೂ ಕುಡಿ. ನಾನು ಸಂಜೆ ಬರುತ್ತೇನೆ ಬೇಗ. ಆಗ ಯೋಚಿಸ ಬಹುದು ಎಲ್ಲ' ಎಂದು ಅವಸರದಿಂದ ಇಳಿದು ಹೋದನು.

ಮಾರ ಹೇಳಿದಳು, 'ನಾನು ಮಧ್ಯಾಹ್ನದ ಗಾಡಿಗೆ ಹೊರಟುಬಿಡುತ್ತೇನೆ.'

ಕಾಫಿ ಕುಡಿದು ಆದಬಳಿಕ ಮಾರ ತನ್ನ ಗಂಟುಮೂಟೆ ಕಟ್ಟಿದಳು. ಅನುಸೂಯಾದೇವಿಯವರು ಈಗ ಏನೆಂದು ಹೇಳಬೇಕು? ಅವರು ಕಂಬನಿ ಗರೆದು ಕುಳಿತುಕೊಂಡರು.

'ನನಗೆ ಗೊತ್ತಿದೇವ್ಮಾ! ನೀವು ಬಂದಿದ್ದೀರೀಂತ ಇದೆಲ್ಲಾ ಆಟ ಆಡ್ತಿದ್ದಾರೆ! ನಾನಿನ್ನು ಇಲ್ಲಿ ನಿಲ್ಲುವುದಿಲ್ಲ. ನನಗೆ ಅವ್ವ ಅಪ್ಪ ಇದ್ದಾರೆ; ಅಕ್ಕ ತಂಗಿಯರಿದ್ದಾರೆ, ಅಣ್ಣನಿದ್ದಾನೆ........'

'ಅವ ಬರೋತನಕ ಕಾದಿರಬಹುದಲ್ಲಾ ಮಾರಾ?'

'ಅವರಿನ್ನು ಬರೋದು ಸಂಜೆ.'

ಹೀಗನ್ನುವಾಗಲೇ ಶಾಮು ಟ್ರಾಮು ಇಳಿದುಬಂದನು.

'ಈಗಲೇ ಹೋಗಬೇಕೇನು ಮಾರಾ?'

ಮಾರ ಕಂಡಿಗೆ ಒರಗಿ ನಿಂತಿದ್ದಳು. ಅನುಸೂಯಾದೇವಿಯವರು ಅಲ್ಲೆ ಕುಕ್ಕರ ಕುಳಿತಿದ್ದರು. ಆಕೆ ನುಡಿದಳು: 'ನಾನೀಗಲೇ ಹೊರಟಿದ್ದೇನೆ. ಗಂಟೆ ಹನ್ನೆರಡಾಯಿತು. ಇನ್ನೊಂದು ಗಂಟೆಯ ಮೇಲೆ ಒಂದು ಟ್ರೇನುಂಟು........ ಅವ್ವನನ್ನು ನೋಡದೆ ನನ್ನ ಮನಸ್ಸು ಕಳವಳಿಸುತ್ತಿದೆ....'

ಶಾಮು ಬಗೆಬಗೆಯಿಂದ ಹೇಳಿದನು. ಆಕೆ ಬಗ್ಗುವಂತಿರಲಿಲ್ಲ.

ಅವಳದು ಒಂದೇ ಮಾತು 'ನನ್ನ ತಾಯಿಯನ್ನು ನೋಡಬೇಕು.' ಶಾಮೂಗೆ ಬೇರೆ ದಾರಿಗಾಣಲಿಲ್ಲ. ಕಳಿಸಿಕೊಟ್ಟನು.

೫

ಶಾಮು ರೂಮಿಗೆ ಬರುವಾಗ ಸಂಜೆಯಾಗಿತ್ತು. ತಾಯಿ ಒಬ್ಬಳೇ ಇದ್ದಳು, ಬಂದವನೇ ಆಕೆಯೊಡನೆ ಜಗಳಕ್ಕೆ ನಿಂತನು. 'ನೀನೇ ಹೇಳಿಕೊಟ್ಟು ಆಕೆಯನ್ನು ಓಡಿಸಿದ್ದಿಯೋ ಇಲ್ಲಿಂದ...... ಒಂದೂ ಅರಿಯದ ಹುಡುಗಿ........ ನಾನು ಅಂದ ಒಂದು ಮಾತಿಗೂ ಒಲ್ಲೆಂದವಳಲ್ಲ....ಇವತ್ತು ಇಷ್ಟು ಹಟಮಾಡ ಬೇಕಾದರೆ ನೀನು ಹೇಳಿದ್ದೇ ಇರಬೇಕು........' ಎಂದು ಗದ್ದರಿಸತೊಡಗಿದನು.

'ನನಗೆ ಗೊತ್ತೇ ಇಲ್ಲ ಶಾಮು. ಹುಡುಗಿ ಎರಡು ವರುಷಗಳಿಂದಲೂ ತೌರಿಗೆ ಹೋಗಿಲ್ಲ ಎಂದಳು. ಅವಳೇ ಹೋಗುತ್ತೇನೆಂದು ಹೇಳಿದಳೇ ವಿನಾ ನಾ ಹೇಳಿಲ್ಲಪ್ಪ........ಸುಮ್ಮನೆ ನನ್ನನ್ನೇಕೆ ಗದ್ದರಿಸುತ್ತಿಯೇ?........'

'ಥೂ!........ಹೆಂಗಸರ ಪಂಚಾತಿಗೆಯೇ ಹೀಗೆ! .......ನೀನೂ ಇಲ್ಲಿ ಇರ ಬಾರದು. . . . ನಾಳೆಯೇ ಹೊರಟುಹೋಗಬೇಕು. . . . . .' ಎಂದು ಹೇಳಿ ತಾಯಿಯನ್ನು ಎದೆಯಾರ ಶಪಿಸುತ್ತ ಶತಪಥ ಹಾಕತೊಡಗಿದನು.

ನಡುವೆ ನಿಂತು ಹೇಳಿದ: 'ನಿನಗೆ ಖರ್ಚಿಗೆ ಈ ಸಲ ಒಂದಿಷ್ಟು ಕಳಿಸಿ ಕೊಡುತ್ತೇನೆ, ಆದರೆ. . . .' ಬೆನ್ನಿಗೆ ಕೈಕಟ್ಟಿಕೊಂಡು ತಿರುಗಿ ಅತ್ತಿತ್ತ ಹರಿ ದಾಡತೊಡಗಿದನು. ಆಗ ಅನುಸೂಯಾದೇವಿಯವರು ಅಂದರು.

'ಹೌದು ಶಾಮೂ ನೀನು ಪ್ರತಿ ತಿಂಗಳು ೨೦ ರೂಪ್ಯಾ ಟಪ್ಪಾಲಿನಲ್ಲಿ ಕಳಿಸಿದ್ದೀಯಲ್ಲೋ? . . . . . . ಎಲ್ಲಿ ನನಗೆ ಒಂದು ಪೈಯಾದರೂ ಕೈಗೆ ಬಂದಿ ರಲಿಲ್ಲವಲ್ಲಪ್ಪಾ . . . . .?

'ನಿನಗೆ ಯಾರೆಂದರು ಇದೆಲ್ಲಾ? . . . .'

'ಹುಡುಗಿ ಹೇಳಿದಳು, ಕಣೋ?'

'ನೀನೇನೆಂದಿ?'

'ನಾನೇನು ಹೇಳಬೇಕೂ?'

ಅವನಿಗೆ ಇನ್ನು ಹೆಚ್ಚು ಬೇಕಾಗಿರಲಿಲ್ಲಿ. ಸಿಟ್ಟಿನಿಂದ ಕುದಿದನು. 'ನೀನು ಯಾಕ್ಬಂದಿಯಮ್ಮಾ ಇಲ್ಲಿ ಮಾಕಾಳೀ? . . . .' ಎಂದು ಕೈಕಾಲು ಬಡಿ ದಾಡಿದನು. 'ಪಾಪ, ಆ ಹುಡುಗಿ ಇನ್ನೇನೆಲ್ಲಾ ಅಂದ್ಕೊಳ್ತಾಳೋ ಏನೋ ? ? ? ? ? . . . . ಇನ್ನು!' ಎಂದು ಅಳುಮೋರೆ ಹಾಕಿಕೊಂಡು 'ನೀನು

ನಾಳೇನೇ ನಿನ್ನ ಈ ಸುಟ್ಟ ಮೋರೇನ ಕಟ್ಕೊಂಡು ಹೊರಡ್ಬೇಕು ಇಲ್ಲಿಂದ—' ಎಂದು ಗದ್ದಲವೆಬ್ಬಿಸಿ ಎತ್ತಲೋ ಹೊರಗೆ ಇಳಿದು ಹೋದನು.

ಆ ಮುದುಕಿ ಅನ್ನನೀರಿಲ್ಲದೆ ಅಂದಿನ ಇರುಳನ್ನೂ ಕಳೆದರು.

ಮಾರನೆಯ ದಿನ ಬೆಳಕುಹರಿವ ಮೊದಲು ಅನುಸೂಯಾದೇವಿಯವರು ತನ್ನ ಗಂಟುಮೂಟೆಗಳನ್ನು ಕಟ್ಟಿಕೊಂಡು ತಯಾರಾದರು ಹಿಂತಿರುಗುವುದಕ್ಕೆ. ಮಗನು ಎದ್ದು ಮೊಗತೊಳೆದು ಬರುವಷ್ಟರೊಳಗೆ ಹೇಳಿದರು,-'ಆಯಿತು. ನಾನಿದ್ದು ಇಲ್ಲಿ ಇಷ್ಟು ತೊಂದರೆ ಎಲ್ಲ ಮಾಡಿದೆ, ಅನ್ನು. ಇನ್ನು ನಾನಿಲ್ಲಿಗೆ ಬರುವುದಿಲ್ಲಪ್ಪ, ಬಂದವಳು ನಾನು ತಿರುಗಿ ಹೋಗಿಬಿಡುತ್ತೇನೆ. ನನ್ನನ್ನು ಕಳಿಸಿಕೊಟ್ಬುಬಿಡು.....' ಎಂದು ಗೋಳೋ ಅತ್ತರು.

ಆದರೂ ಮಾತಿಗೆ ಅಂದನು: 'ಎರಡು ದಿನ ನಿಂತು ಹೋಗ್ಬಿಡಬಹುದಮ್ಮ. ಯಾಕೆ ಮದ್ರಾಸ ಇಷ್ಟು ಬೇಗ ಬಂತೇನು?'

'ಮದ್ರಾಸ ಏನಾಗಿದೆ? ನನಗೇ ನಾನು ಬೇಸರದ ಹಾಡಾಗಿದ್ದೇನೆ. ಯಾಕೆ ಸಾಯ್ಲಿಲ್ಲಾಂತ ಒಂದು ಬೇಸರ, ಅಷ್ಟೆ. ಅದಕ್ಕೆ ನಿಮ್ಮನ್ನೂ ಸುಖವಾಗಿಡದೆ ಸಾಯೋದಕ್ಕಿಂತ ....' ಕಂಬನಿ ಕೋಡಿ ಹರಿಯಿತು.

'ಆಯಿತು, ಮಧ್ಯಾಹ್ನದ ಗಾಡಿಯಲ್ಲಿ ಹೋಗಬಹುದು' ಎಂದು ಎಲ್ಲಿಗೋ ಹೊರಡುವವನಿದ್ದನು. ಆ ತಾಯಿ ಹೇಳಿದಳು: 'ಈಗಲೇ ಗಂಟೆ ಹತ್ತಾಯಿತು. ಇನ್ನು ನಾನು ಇಲ್ಲಿ ಉಳಿದಿರುವುದಿಲ್ಲ. ಕಳಿಸಿದರೆ ಕೊಡು; ಇಲ್ಲವೆ ಬಿಡು; ನಾನೇ ಹೇಗಾದರೂ ಹೋಗುತ್ತೇನೆ...........'

ಶಾಮು ಇಲ್ಲೂ ಸಿಕ್ಕಿದನು.

ಇಬ್ಬರೂ ರೇಲವೇ ನಿಲ್ದಾಣಕ್ಕೆ ಹೋದರು.

ತಾಯಿಯನ್ನು ಟ್ರೇನಿನಲ್ಲಿ ಕುಳ್ಳಿರಿಸಿ ಅವರ ಕೈಯಲ್ಲಿ ಹತ್ತು ರೂಪಾಯಿ ನೋಟನ್ನಿಟ್ಟನು. ಅವರು ಅದನ್ನು ಕೊಳ್ಳಲಿಲ್ಲ. ಮತ್ತೆ ಶಾಮು ಏಕೆ ಅತ್ತನೋ! 'ನೀ ಅಳಬ್ಯಾಡಪ್ಪಾ!' ಎಂದು ಅವರು ಆ ನೋಟನ್ನು ಇಸುಕೊಂಡರು. 'ಚಿಂತಿಲ್ಲ, ನೀ ಇಲ್ಲೇ ಸುಖವಾಗಿರಪ್ಪಾ, ನಾ ಸತ್ತ್ರವ್ಯಾಲಾದರೂ ಬಂದರೆ ಬಾ!' ಎಂದು ಅವರೂ ಅತ್ತರು; ಅವನದೂ......

ರಾಮು ರೇಲವೆ ನಿಲುದಾಣದಿಂದ ರೂಮಿಗೆ ಬಂದವನು ಒಂದು ವಾರದ ರಜೆಗೆ ಬರೆದು ಹಾಕಿದನು. ಗಂಟೆ ಸುಮಾರು ೪॥ಯಾಗಿತ್ತು. ೬ ಗಂಟೆಗೆ ಮತ್ತೊಂದು ಟ್ರೇನಿತ್ತು. ಅವನು ನೆಟ್ಟಗೆ ಮಾವನ ಮನೆಗೆ ಹೋಗುವ

ದೆಂದು ನಿಶ್ಚಯಿಸಿದನು. ಯೋಚಿಸಿದ್ದೇ ಹೊರಟನು.

ಮಾವನ ಮನೆಯಲ್ಲಿ ಈ ಬಾರಿ ಎಂದಿನಂತೆ ಯಾರೂ ಅದರದಿಂದ ಬರ ಮಾಡಿಕೊಳ್ಳಲಿಲ್ಲ. 'ಬಂದಿದ್ದಾನೆ, ಹೋಗೆನ್ನುವುದಕ್ಕಾಗುತ್ತೆಯೇ?' ಎಂದು ಮಾವ ಅಷ್ಟಕ್ಕಷ್ಟು ಮಾತನಾಡಿದರು. ಅತ್ತೆ ಆತನ ವಿಚಾರವನ್ನೇ ತೆಗೆದು ಕೊಳ್ಳಲಿಲ್ಲ. ಮೀರ ಆ ನೆರೆಯಲ್ಲೆ ಎಲ್ಲೂ ಇಲ್ಲದವಳಂತೆ ಒಳಗೇ ಇದ್ದಳು.

ಕಡೆಗೆ ಊಟ ಉಪಚಾರವಿರಬಾರದೇ? ಮೀರನ ಸಣ್ಣ ತಮ್ಮನೊಬ್ಬ ಬಂದು, 'ಉಣ್ಣುವುದಾದರೆ ಬರಬೇಕಂತೆ!' ಎಂದನು. ಶಾಮು ಏನೋ ಗಡಿಬಿಡಿಯಿಂದ ಎದ್ದನು. ಆಗ ಅವನೆಂದ, 'ಉಣ್ಣಬೇಕಾದರೆ ಮಿಂದು ಬರಬೇಡವೇ?' ಶಾಮೂಗೆ ನಾಚಿಗೆಯಾಯಿತು. ಅಂಗಿ ಉಡುಪುಗಳನ್ನು ಕಳಚಿ ಮಿಾಯುವುದಕ್ಕೆ ಹೋದನು. ಮಿಂದು ಊಟಕ್ಕೆ ಕುಳಿತನು.

ಬಡಿಸುವುದಕ್ಕೂ ಆಕೆ ಎದುರು ಬರಲಿಲ್ಲ. ಮಾವನೊಂದಿಗೆ ಆಗ ಒಂದು ಮಾತು ಕೇಳಿದ. 'ಮೀರ ಎಲ್ಲಿ?' ಅವರೆಂದರು, 'ಆಚೆಗೆಲ್ಲೋ ಇರಬೇಕು.'

'ಅವಳು ಬರುವುದಾದರೆ ನಾಳೆ ಕರೆದುಕೊಂಡು ಹೋಗುತ್ತೇನೆ.'

'ಅವಳು ಬರುವುದಾದರೆ ಯಾರದೇನು ಅಡ್ಡಿ?'

ಆದರೆ ಶಾಮೂನೆದುರು ಅವಳು ಬರಬೇಕಲ್ಲ?

ಊಟ ಮುಗಿದು ಶಾಮು ಮಲಗಲು ಹೋದನು. ಮೀರ ಯಾರೋ ಆಳು ಮಕ್ಕಳಿಂದ ಹಾಸಿಗೆ ತಯಾರು ಮಾಡಿಸಿಟ್ಟಿದ್ದಳು. ಶಾಮು ಹೋಗಿ ಮಲಗಿಕೊಂಡನು. ಮೀರ ಬಂದು ಮೊಗ ತೋರಿಸಿಯಾಳು, ಬಂದಾಳು, ಈಗ ಬಂದಳು,—ಇನ್ನೊಂದು ಇಷ್ಟು ಹೊತ್ತಿನ ಮೇಲೆ ಬರುವಳು ಎಂದು ಅವನು ಎಣಿಕೆ ಹಾಕುತ್ತಲೇ ನಿದ್ದೆಹೋದನು. ಅವಳು ಬರಲಿಲ್ಲ.

ಮಾರನೆಯ ದಿನ ಬೆಳಗು ಉದಿಸಿತು.

ಶಾಮು ಮೀರೆಯ ಸಣ್ಣ ತಮ್ಮನಿಗೆ ಮಿಠಾಯಿಯ ಆಸೆ ತೋರಿಸಿ 'ಅಕ್ಕ ಎಲ್ಲಿ?' ಎಂದು ಕೇಳಿದನು.

ಅವನೆಂದನು 'ಅಕ್ಕ ಇನ್ನು ಮೂರು ದಿವಸ ಹೊರಗು! . . . ನಿಮ್ಮನ್ನು ನೋಡುವುದಿಲ್ಲ ಕೂಡ, ನೀವು ಇವತ್ತೇ ಹೋಗುವಿರಂತಲ್ಲ ಭಾವಯ್ಯ?'

ಈ ಭಾವ ಮಾತನಾಡಲಿಲ್ಲ.

ಅತ್ತ ಮೀರೆಯ ತಾಯಿ ಹೇಳಿದಳು. 'ಹೋಗೇ ಮೀರಾ, ಅವ ಬಂದಿದ್ದಾನಲ್ಲ, ಹೋಗಿ ಮಾತನಾಡಲೂ ಬಾರನೇ? . . .'

'ಬಾರದೆಂತಲೇ ಬಂದಿದ್ದೇನೆ.'

'ಹಟಮಾಡಬೇಡವೇ! . . . . ಹುಡುಗೀತನ ಆಡಬೇಡ . . . .'

'ಹುಡುಗೀತನಕ್ಕಿಂತ ಪೊಟ್ಟುತನ ಆಡಬೇಡೆಂದು ಹೇಳಿದರೆ ಒಪ್ಪುತ್ತೇನೆ.'

'ಅಂತದೇನು ಬಂತೀಗ?'

'ಬರೋದೇನೀಗ?' ನಾನು ಒಬ್ಬ ಎದೆಯಿರುವ ಗಂಡಸಿನ ಕೂಡ ಬಾಳುವೆ ಮಾಡುವುದಿಲ್ಲ, ಒಂದು ಕಲ್ಲಿನೊಡನೆ ಒಂದು ಪೊಟ್ಟು ಭೂತದೊಂದಿಗೆ ಎಂದು ನಾನು ಇಂದು ಅರಿತಿರುವೆ . . . . .'

'ನಿನ್ನ ಮನಸ್ಸಿಗೆ ಬಂದಹಾಗೆ ಮಾಡು. ಹುಚ್ಚುತನ! . . . .'

'ಹುಚ್ಚು ಇರಲಿ, ಪೆಚ್ಚು ಇರಲಿ; ನಾನು ನಿಮಗೆ ಹೊರಗಾದ ಮಗಳು ಅಲ್ಲವೆ? ಹೆಚ್ಚಾದರೆ ಹೋಗಲಿ ಬಿಡಿರಿ. ಇಲ್ಲಿ ಕೆಲಸಕ್ಕೆ ನಿಂತಿರುತ್ತೇನೆ . . . . ಅನ್ನ ಹಾಕುತೀಯೋ ಇಲ್ಲೋ . . . . .?'

'ಅಷ್ಟಕ್ಕೂ ಬಂತೇನು? ನನಗೆ . . . . .'

'ನನಗೆ ತಾಯಿಬೇಕು, ತಂದೆ ಬೇಕು. ಅವರಿಗೆ ಯಾರಿಲ್ಲದಿದ್ದರೂ ಆದೀತು. ಯಾರಾದರೂ ಸೂಳೇರಿದ್ದರೆ ಸಾಕು . . . . . ನಾನು ಮತ್ತೆ ನರಳಿ ಸಾಯೋದಕ್ಕೆ ಹೊಂದಿಲ್ಲ . . . .'

ತಾಯಿ, ಹೆತ್ತ ಕರುಳು; ಕಣ್ಣು ತೆರೆದಳು.

ಮಾರ ಕಡಾಕಡಿ ಹೇಳಿದಳು. ನನಗೆ ಗಂಡನ ಮನೆಯ ಬಾಳುವೆ ಸಾಕು . . . . . ಇನ್ನು ಬೇಡ ತಾಯೀ—' ಎಂದು ಹೇಳುತ್ತ, ಬ್ಲೌಸಿನಲ್ಲಿ ಅಡಗಿಸಿಟ್ಟು ತಂದಿದ್ದ, ಶಾಮು ಬರೆದ ಡೈರಿಯ ಹಳೆಯ ಹಾಳೆಗಳನ್ನು ತನ್ನ ತಾಯಿಯ ಮುಂದೆ ಚೆಲ್ಲಿದಳು.

ತಾಯಿ ಅಂದುಕೊಂಡಳು, 'ಆದರೂ ಚಿಕ್ಕ ಹುಡುಗಿ ಇನ್ನೂ!—'

ಮಾರ ಗಂಡನನ್ನು ಮಾತನಾಡಿಸಲಿಲ್ಲ. ಅತ್ತೆ-ಮಾವಂದಿರು ಆಕೆಯ ಗಂಡನೊಡನೆ ಕೂಡಿಸಲಿಲ್ಲ. ಶಾಮು ತಿರುವುಮುರುವಾದನು. ಕೊನೆಯ ಮಾತು ಉಳಿದಿತ್ತು, ಅದನ್ನೂ ಹೇಳಿದ, 'ನಾನು ಇವತ್ತೇ ಸಂಜೆ ಹೋಗಬೇಕು. ಅವಳನ್ನು ಕಳಿಸಿಕೊಡಿರಿ . . . . . .'

ಮಾವ ಅಂದರು: 'ನಾಲಕು ದಿನ ಕಳೆದು ಬರುತ್ತಾಳೆಂತ ಹೇಳಿದಳು. ನೀನು ಹೋಗು—'

ಅವನು ಹೋದನು.

ರೂಮಿನಲ್ಲಿ ಶಾಮುವನ್ನು ಕಾದುಕೊಂಡು ತಾರೊಂದು ತಡದಿತ್ತು. "ವಿವಾಹ ಒಡಂಬಡುವುದಿಲ್ಲ. ನಿನಗೆ ಬೇರೆ ಹೆಣ್ಣು ನೋಡಿಕೊಂಡಿರು —ಮಾವ" ಎಂದು.

ಶಾಮು ಇದನ್ನು ಕೊಂಡು ಓದಿದನು, ಓದಿದನು, ಓದಿದನು! ಹೀಗೆಲ್ಲಾ ಏಕಾಯ್ತು ಎಂದವನಿಗೇ ಗೊತ್ತು, ಹೇಗೆಂದು ಗೊತ್ತಿರಲಿಲ್ಲ. ಮಾತ್ರ ತಾಯಿಯನ್ನು ಬಾಯಿತುಂಬ ಬೈದು ನಿಂದಿಸಿಕೊಂಡನು. ಅದು ತನ್ನದೇ ನಿಂದೆ ಎಂದು ಅವನಿಗೇ ಗೊತ್ತಿರಲಿಲ್ಲ.

ಕೆನರಾ ಛಾಪಖಾನೆ, ಮಂಗಳೂರು